ಕಾಯಕವೇ ಕೈಲಾಸ

# ಸಿದ್ಧಗಂಗಾ

## ಗುರುವಂದನಾ ಸಂಚಿಕೆ

ಸಂಪುಟ : ೫೩ ಏಪ್ರಿಲ್ ೨೦೧೭ ಸಂಚಿಕೆ : ೦೪


ಶಿವಯೋಗಾನುಷ್ಠಾನದಲ್ಲಿ ಪೂಜ್ಯ ಶ್ರೀಗಳು


ಕಛೇರಿ ಕಾರ್ಯದಲ್ಲಿ


ಮಕ್ಕಳ ಪ್ರಸಾದ ವ್ಯವಸ್ಥೆಯ ವೀಕ್ಷಣೆ


ಪೂಜ್ಯ ಶ್ರೀಗಳವರು 'ಉದ್ಧರಣಿ' ಲೇಖಿಸುತ್ತಿರುವುದು


ಪೂಜ್ಯ ಶ್ರೀ ಶ್ರೀಗಳವರ ಜೀವಕಾರುಣ್ಯ


ಸಾಮೂಹಿಕ ಪ್ರಾರ್ಥನೆ


110ರ ಹೆಜ್ಜೆಗಳನ್ನಿಡುತ್ತಿರುವ ತ್ರಿವಿಧ ದಾಸೋಹಿ
ಪರಮಪೂಜ್ಯ ಶ್ರೀ ಶ್ರೀಗಳವರ
ದಿವ್ಯ ಶಿವಚರಣಗಳಿಗೆ ಭಕ್ತ ಕೋಟಿಯ
ಸಾಷ್ಟಾಂಗ ಪ್ರಣಾಮಗಳು


ಪದ್ಮಭೂಷಣ ಪ್ರದಾನ


'ಬಸವ ಪುರಸ್ಕಾರ' ರಾಷ್ಟ್ರೀಯ ಪ್ರಶಸ್ತಿ ಪ್ರದಾನ


'ಕರ್ನಾಟಕ ರತ್ನ' ಪ್ರಶಸ್ತಿ ಪ್ರದಾನ


ಕರ್ನಾಟಕ ವಿಶ್ವವಿದ್ಯಾನಿಲಯದಿಂದ 'ಗೌರವ ಡಾಕ್ಟರೇಟ್' ಪ್ರದಾನ


ಬೆಂಗಳೂರು ವಿಶ್ವವಿದ್ಯಾನಿಲಯದಿಂದ 'ಗೌರವ ಡಾಕ್ಟರೇಟ್' ಪ್ರದಾನ


'ವಿಶ್ವ ಸಂತ' ಪ್ರಶಸ್ತಿ ಪ್ರದಾನ




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ಕಾರ್ಯನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ
ಸಿ. ಕುಮಾರಸ್ವಾಮಿ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೫೩ ಏಪ್ರಿಲ್ ೨೦೧೬ ಸಂಚಿಕೆ : ೦೪


## ಒಳಪುಟಗಳಲ್ಲಿ .................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

## ಯುಗಪುರುಷ

ಕರುನಾಡ ಪುಣ್ಯ, ಭರತಭೂಮಿಯ ಭಾಗ್ಯ, ಮನುಕುಲದ ಮಂಗಳಪುರುಷ, ಶ್ರೀ ಸಿದ್ಧಗಂಗಾಮಠದ ಪ್ರಾಣಜೀವಾಳ ಪದ್ಮಭೂಷಣ, ಕರ್ನಾಟಕರತ್ನ, ರಾಷ್ಟ್ರೀಯ ಬಸವಪ್ರಶಸ್ತಿ ಪುರಸ್ಕೃತ, ತ್ರಿವಿಧ ದಾಸೋಹಜ್ಯೋತಿ, ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ೧೧೧ನೆಯ ವರ್ಷಕ್ಕೆ ಮುನ್ನಡೆಯುತ್ತಿರುವ ಏಪ್ರಿಲ್ ಒಂದರ ಶುಭ ಸಂದರ್ಭದಲ್ಲಿ ಶೋಭಾಯಾತ್ರೆ ರಥಾ ಕರ್ನಾಟಕದ ಹನ್ನೆರಡು ಜಿಲ್ಲೆಗಳಲ್ಲಿ ಸಂಚರಿಸುವುದರ ಮೂಲಕ ಪರಮಪೂಜ್ಯರು ಸಲ್ಲಿಸುತ್ತ ಬಂದಿರುವ ಸೇವಾಮಣಿಹವನ್ನು ಭಕ್ತ ಜಗತ್ತಿಗೆ ತಲುಪಿಸುವ ಕೈಂಕರ್ಯದಲ್ಲಿ ಮುನ್ನಡೆದಿದೆ.

೩-೩-೨೦೧೮ ರಂದು ಶ್ರೀಮಠದಲ್ಲಿ ಪೂಜ್ಯ ಶ್ರೀ ಕುಮಾರಟುರಿಜಗುಣರು ಭೇಟಿಯಾದ ಸಂದರ್ಭದಲ್ಲಿ ಹೇಳಿದ್ದು, ಶೋಭಾಯಾತ್ರೆ ಕರ್ನಾಟಕದ ಎಲ್ಲ ಜಿಲ್ಲೆಗಳಿಗೂ ಮುನ್ನಡೆಯಬೇಕು. ಅದರಲ್ಲಿಯೂ ಕಲ್ಯಾಣ ಕರ್ನಾಟಕದ ಜಿಲ್ಲೆಗಳಾದ ಧಾರವಾಡ, ಹುಬ್ಬಳ್ಳಿ, ಕಲಬುರ್ಗಿ, ಬೀದರ್, ಬಾಗಲಕೋಟೆ ಅಲ್ಲದೆ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ, ಹುಬ್ಬಳ್ಳಿ, ಹಾವೇರಿ ಕಡೆಗಳಿಗೂ ಮುಂದುವರಿಯುವುದಾಗಬೇಕು. ಪರಮಪೂಜ್ಯರ ಸೇವೆ ರಾಜ್ಯದುದ್ದಗಲಗಳಿಗೆ ವ್ಯಾಪಿಸಿರುವಂತಹುದು. ಮಹಾನುಭಾವರು ಯುಗಪುರುಷರು ಎಂದರು.

ಹೌದು, ಶತಮಾನ ಕಂಡಿರುವ ಶತಮಾನ ತುಂಬಿರುವ, ಶಕಪುರುಷನಾಗಿ ಬೆಳಗಿರುವ ಪರಮಪೂಜ್ಯರು ಯುಗದಸಿರಿಯಾಗಿ ಜಗದಸಿರಿಯಾಗಿ ಅರಳಿರುವ ಪುಣ್ಯರೂಪರು.

ಏಪ್ರಿಲ್ ಒಂದರಂದು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ೧೧೧ನೆಯ ಜನ್ಮದಿನೋತ್ಸವ ಶ್ರೀಮಠದ ಅಧ್ಯಕ್ಷರಾಗಿರುವ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರ ನೇತೃತ್ವದಲ್ಲಿ ಆಯೋಜಿತವಾಗಿದೆ. ತಮಗೆಲ್ಲರಿಗೂ ಸ್ವಾಗತ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು







## ಶರಣ ಸಂಸ್ಕೃತಿ

ಕಲ್ಯಾಣ ಕರ್ನಾಟಕದ ಕಣ್ಣಾಗಿ, ಹೃದಯವಾಗಿ ಅರಳಿದ ಪುಣ್ಯಭೂಮಿ. ಮನುಕುಲದ ಮಂಗಳಸಿರಿಯೆನಿಸಿದ ಬಸವಣ್ಣನವರು ಕಾಯಕ ದಾಸೋಹ ತತ್ತ್ವಗಳನ್ನು ಅಸ್ಪೃಶ್ಯತಾ ನಿವಾರಣೆಯನ್ನು ಮಾನವತಾ ಪ್ರೀತಿಯನ್ನು ಅನ್ಯರಿಗೆ ಅಸಹ್ಯಪಡದ ಮನೋಧರ್ಮವನ್ನು, ಲೋಕಮಾನ್ಯಗೊಳಿಸಿದ ಸಾಧನಾಕ್ಷೇತ್ರ, ಸ್ಮರಿಸಿದಾಕ್ಷಣ ರೋಮ ಹರ್ಷವನ್ನುಂಟುಮಾಡುವ ಪರಮಪವಿತ್ರ ಪಾವನಭೂಮಿ.

ಕಲ್ಯಾಣದ ಕ್ರಾಂತಿಯ ನಂತರ ಕಾಲನ ಕಾವಳಕ್ಕೆ ಸಿಲುಕಿ ಕೊರಗಿದ್ದು ಇದೀಗ ಐತಿಹಾಸಿಕ ದಾಖಲೆ. ಅಕ್ಷರ ಸಂಸ್ಕೃತಿಯ ಅರಿವಿಲ್ಲದೆ ನರಳಿದ ದೀನದಲಿತರನ್ನು ಅಕ್ಕರೆಯಿಂದ ಆಲಿಂಗಿಸಿಕೊಂಡು ಅರಿವಿನರಮನೆಯಲ್ಲಿ ಅನುಭವ ಮಂಟಪದಲ್ಲಿ ಅರಳುವಂತೆ ಮಾಡಿದ ಶರಣ ಸಂಸ್ಕೃತಿಯ ಸಾಧನೆ ಯಾರೂ ಮರೆಯಲಾಗದಂಥದು. ಎಂದೆಂದೂ ಸ್ಮರಿಸಬೇಕಾದ ಪುಣ್ಯ ಘಟನೆ.

'ಭೂಮಿಯಲ್ಲಿ ಬಿತ್ತಿದ ಬೀಜ ಕಟ್ಟಿತ್ತೆನಬೇಡ ಮುಂದಣ ಫಲದೊಳಗರಸಿಕೋ' ಎಂಬಂತೆ ಬಸವಾದಿ ಶರಣರು ಬಿತ್ತಿದ ತತ್ತ್ವಗಳು ಅನಂತರದ ಶತಮಾನಗಳಲ್ಲಿ ಮಠಮಾನ್ಯಗಳ ಮೂಲಕ ಉದಾತ್ತ ಪುಣ್ಯಶೀಲರ ದೂರದೃಷ್ಟಿಯ ಫಲವಾಗಿ ಜ್ಞಾನಾನ್ನ, ಸೇವಾಸದನಗಳಾಗಿ, ಕ್ರಿಯಾಮುಖವಾದದ್ದು ಸಮಾಜದ ಭಾಗ್ಯ, ನಾಡಿನ ಪುಣ್ಯ

* * *

ಕಾಯಕ-ದಾಸೋಹಗಳು ಶರಣರು ಜಗತ್ತಿಗೆ ನೀಡಿದ ಸಾರ್ವಕಾಲಿಕ ತಾರಕ ಮಂತ್ರಗಳು. ಕಾಯಕ ವ್ಯಕ್ತಿಯ ಏಳ್ಗೆಯನ್ನು, ಸಮಾಜದ ಕಲ್ಯಾಣವನ್ನು ಮತ್ತು ಆತ್ಮ ವಿಕಾಸವನ್ನು ಪ್ರದಾನಿಸುವ ಅಮೂಲ್ಯ ತತ್ತ್ವ. ದೇಹ ಮನಸ್ಸುಗಳನ್ನು ಪವಿತ್ರ ಮಾಡುವ ಶುದ್ಧ ಸಂಜೀವಿನಿ. ಮನಸ್ಸಿನ ಏಕಾಗ್ರತೆ ಕಾಯಕ ರಾಜಮಾರ್ಗ. ದಾಸೋಹ ಸಮಾಜಾಭಿವೃದ್ದಿಗೆ ತೆರೆದುಕೊಂಡ 'ಶಿವಪಥ.' ದಾಸೋಹದಲ್ಲಿ ಆತ್ಮ ಕಲ್ಯಾಣವಿದೆ, ಜಂಗಮಶೀಲವಾದ ಸಮಾಜದ ಉತ್ಥಾನವಿದೆ. ಶರಣರು 'ಕಾಯಕವೇ ಕೈಲಾಸ'ವೆಂದರು.

# ಶ್ರೀ ಸಿದ್ಧಲಿಂಗೇಶ್ವರ ವಚನ



*ಕಾಮದಿಂದ ಕರಗಿದೆನಯ್ಯಾ ಕ್ರೋಧದಿಂದ ಕೊರಗಿದೆನಯ್ಯಾ*
*ಲೋಭಮೋಹಂಗಳಿಂದಲೇ ನೊಂದೆನಯ್ಯಾ*
*ಮದ ಮತ್ಸರಂಗಳಿಂದ ಬೆದ ಬೆರಗೆ ಬೆಂದೆನಯ್ಯಾ*
*ಅಹಂಕಾರ ಮಮಕಾರಂಗಳಿಂದ ಮತಿ ಮಂದನಾಗಿದ್ದೆನಯ್ಯಾ*
*ಇದು ಕಾರಣ ಎನ್ನ ಕಾಮಾದಿ ಅರಿಷಡ್ವರ್ಗಂಗಳ ಕಳದು*
*ಅಹಂಕಾರ ಮಮಕಾರಗಳೆಂಬುವ ಮಾಣಿಸಿ*
*ನಿರಹಂಕಾರವೆಂದೆನಿಸಯ್ಯಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಕಾಮದಿಂದ – ಇತರ ಕಾಮ್ಯಾರ್ಥದ ಮೇಲಣ ಬಯಕೆಯಿಂದ, ಕರಗಿದೆನಯ್ಯಾ – ಲೀನನಾದೆನಯ್ಯಾ, ಕ್ರೋಧದಿಂದ – ಸಿಟ್ಟಿನಿಂದ, ಕೊರಗಿದೆನಯ್ಯಾ – ಕೊರತೆಗೊಳಗಾದೆನಯ್ಯಾ, ಲೋಭ – ಲುಪ್ತತ್ವವು, ಮೋಹಗಳಿಂದ – ಮಮಕಾರಗಳಿಂದ, ಅತಿ ನೊಂದೆನಯ್ಯಾ – ಬಹಳ ಘಾಸಿಯಾದೆನಯ್ಯಾ, ಮದ – ಗರ್ವವು, ಮತ್ಸರಂಗಳಿಂದ–ಕೇಣ ಸರಂಗಳಿಂದ, ಬೆದಬೆದನೆ – ಧಗಧಗನೆ, ಬೆಂದೆನಯ್ಯಾ – ದಹನವಾದೆನಯ್ಯಾ, ಅಹಂಕಾರ – ನಾಹಂ ನಾಹಂ ಎಂಬ ಮೂಲ ಅಹಂಕಾರವು, ಮಮಕಾರದಿಂದ – ನನ್ನದೆಂಬ ಮಮಕಾರದಿಂದ, ಮತಿ ಮಂದನಾಗಿದ್ದೆನಯ್ಯಾ – ಜ್ಞಾನ ಬಾಹ್ಯನಾಗಿರ್ದೆನಯ್ಯಾ, ಇದು ಕಾರಣ – ಇದು ನಿಮಿತ್ಯಾರ್ಥ, ಎನ್ನ ಕಾಮಾದಿ ಅರಿಷಡ್ವರ್ಗಗಳ – ನನ್ನ ಕಾಮಾದಿ ಅರಿಷಡ್ವರ್ಗಂಗಳನು, ಕಳೆದು – ನಷ್ಟವ ಮಾಡಿ, ಅಹಂಕಾರ – ಮೂಲ ಅಹಂಕಾರವು, ಮಮಕಾರ – ನನ್ನದೆಂಬ ಮಮಕಾರವನು, ಮಾಣಿಸಿ – ಬಿಡಿಸಿ, ನಿರಹಂಕಾರಿ –ನಿರ್ಮಮಕಾರಿಯೆಂದು ಹೇಳಿಸಯ್ಯ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

# ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಎಲ್ಲರಲಿ ನೀನಿರುವೆ ಎಲ್ಲರಿಗಾಗಿರುವೆ
ಎಲ್ಲರೆದೆಯಲಿ ತುಂಬಿ ತುಳುಕಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೀತಿಯನೆ ಬಿತ್ತಿದೆ ಪ್ರೀತಿಯನೆ ನೀ ಬೆಳೆದೆ
ಪ್ರೀತಿಯ ಲೋಕವನೆ ವಿರಚಿಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣನನಪ್ಪಿದೆ ಬಸವಣ್ಣನನೊಪ್ಪಿದೆ
ಬಸವತತ್ವಗಳಲಿ ಬದುಕಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಗೆ ಬಸವಣ್ಣ ಮುಕ್ತಿಗೆ ಬಸವಣ್ಣ
ಭಕ್ತಿ ದಾಸೋಹಕೆ ಬಸವಣ್ಣನ ನೆನೆದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎನ್ನ ಮನ ಅನುದಿನವು ನಿನ್ನನೇ ನೆನೆವಂತೆ
ಹರಸಿ ಆಶೀರ್ವದಿಸಿ ಕರುಣಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿರೂಪನು ನೀನುಶಕ್ತಿರೂಪನು ನೀನು
ಸತ್ಯಸ್ವರೂಪಿ ಶಿವನೀನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಸಿತಭೂಷನು ನೀನು ಎಸೆವ ಚೆಂಗಾವಿಯ
ಜಂಗಮಪ್ರಭು ಸೂರ್ಯನೀನಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಕ್ಕಳೆ ಇಹವೆಂದೆ ಮಕ್ಕಳೆ ಪರವೆಂದೆ
ಮಕ್ಕಳೆ ಇಹಪರದ ಚಿತ್ಕಳೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯ ಸದಾಚಾರಿ ನಿತ್ಯ ನಿಜಾವತಾರಿ
ಮರ್ತ್ಯವ ಮಹಗೈವಮಹದೇವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಟ್ಟಿದೆ ಮಹಾಮನೆಯ ಕರೆತಂದೆ ಶರಣರ
ಅರಿವಿನ ನುಡಿಲಿಂಗ ಕಾಣಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**– ಹೆಚ್.ವಿ. ವೀರಭದ್ರಯ್ಯ**







# ಗುರು

**– ಶ್ರೀ ಸಿದ್ಧೇಶ್ವರ ಸ್ವಾಮಿಗಳು ***

**ಈ** ಭಗವತ್ ಚಿಂತನೆಯ ಕ್ಷೇತ್ರದಲ್ಲಿ ಗುರುವಿನ ಪಾತ್ರ ಬಹು ದೊಡ್ಡದು. ಎಲ್ಲ ಧರ್ಮಗಳಲ್ಲಿಯೂ, ಅದೃಶ್ಯವಾದ ಅನಂತತೆಯ ಕ್ಷೇತ್ರವನ್ನು ಸೇರುವ ಪ್ರಯತ್ನದಲ್ಲಿ ಮನುಷ್ಯ ಸಾಮಾನ್ಯವಾಗಿ ವಿಫಲನಾಗುತ್ತಾನೆ – ಗುರುವಿನ ಆಸರೆ ಇರದೆ ಇದ್ದರೆ, ಸಂತರ ಮಾರ್ಗದರ್ಶನ ಇರದಿದ್ದರೆ. ಆದ್ದರಿಂದಲೇ ಗುರುವಿಗೆ ಅಷ್ಟು ಪೂಜ್ಯತೆ. ಶ್ರೇಯೋಮಾರ್ಗಿಗಳೆಲ್ಲರೂ ಬದುಕಿನಲ್ಲಿ ಗುರುವನ್ನು ಸ್ವೀಕರಿಸಿದರು. ಅಷ್ಟೇ ಅಲ್ಲ, ಗುರುವಿಗೂ ಭಗವಂತನಿಗೂ ಭಿನ್ನತೆ ಇಲ್ಲ ಎನ್ನುವಷ್ಟು ಪೂಜ್ಯ ಭಾವ ತಾಳಿದರು. ತೈತ್ತಿರೀಯ ಉಪನಿಷತ್ತು ಹೇಳಿತು.

*ಆಚಾರ್ಯಃ ಪೂರ್ವರೂಪಂ । ಅಂತೇವಾಸೀ ಉತ್ತರರೂಪಂ*

**ಆ**ಚಾರ್ಯ ಪೂರ್ವರೂಪ. ಶಿಷ್ಯ ಉತ್ತರರೂಪ. ಇಬ್ಬರ ಮಧ್ಯೆ ಸಂಧಿ ಆತ್ಮವಿದ್ಯೆ! ಅನುಸಂಧಾನವು ಪ್ರವಚನ! ಜ್ಞಾನ ಯಾರಿಂದ ಹರಿದು ಬರುತ್ತದೆ ಆತ ಆಚಾರ್ಯ; ಜ್ಞಾನವನ್ನು ಸ್ವೀಕರಿಸುವವ ಶಿಷ್ಯ. ಈ ಜ್ಞಾನವು ಆತ್ಮವಿದ್ಯೆ. ಇದು ಅಮೃತ ವಿದ್ಯೆ! ಈ ಜ್ಞಾನ ಪ್ರವಾಹಕ್ಕಾಗಿ ಬಳಸುವ ಮಾಧ್ಯಮ ಪ್ರವಚನ!

**ಅ**ರಣ್ಯದ ಮಧ್ಯದಲ್ಲಿ ಆಶ್ರಮ. ಪ್ರಶಾಂತವಾದ ವಾತಾವರಣ. ಸುತ್ತಮುತ್ತೆಲ್ಲ ಸುಂದರವಾದ ನಿಸರ್ಗ. ಅಲ್ಲಿ ಅವರು ಕುಳಿತು ಮಾಡಿದ್ದೇನು? ಸುಯೋಗ್ಯ ಸಮರ್ಥ ಶಿಷ್ಯರನ್ನು ಕರೆದುಕೊಂಡು ಅಮೃತ ವಿದ್ಯೆಯನ್ನು ಸುರಿದರು! ವೈಭವದ ಆಸರೆ ಅವರಿಗೆ ಬೇಕಿರಲಿಲ್ಲ. ರಾಜ ಮಹಾರಾಜರು ಬಂದರೂ ಕೂಡ ಅವರಲ್ಲಿ ಅಷ್ಟಾಗಿ ಆಸಕ್ತಿ ತಾಳಿದವರಲ್ಲ. ಇಂತಹ ಅಪ್ರತಿಮ ಜ್ಞಾನಪ್ರಿಯರು ಆ ಗುರುಗಳು; ನಿಸ್ಪ್ರುಹ ವ್ಯಕ್ತಿಗಳು. ಜೀವನಾವಧಿ ವಿದ್ಯೆಯನ್ನು ನೀಡಿದರು. ಅನುಭವಿಸಿದರು.

**ತೈ**ತ್ತಿರೀಯ ಉಪನಿಷತ್ ಹೇಳುತ್ತದೆ; ಏನನ್ನಾದರೂ ಮಾಡು; ದಮ, ಶಮ, ತಪಸ್ಸು ಏನಾದರೂ ಮಾಡು; ಆದರೆ ಸ್ವಾಧ್ಯಾಯ ಪ್ರವಚನ ತ್ಯಜಿಸಬೇಡ. ಆ ಔಪನಿಷದಿಕ ಮಾತನ್ನು ಚಾಚೂ ತಪ್ಪದೆ ಆಚರಿಸಿದವರು ಆಚಾರ್ಯರು! ಶ್ರೇಷ್ಠ ಆಚಾರ್ಯರೊಬ್ಬರು ದೊರೆತರೆ, ಅವರ ಸನ್ನಿಧಾನ-ನಿವಾಸ ಭಾಗ್ಯ ಉಂಟಾದರೆ ಜ್ಞಾನ ತನ್ನಷ್ಟಕ್ಕೆ ತಾನೇ ಹರಿದು ಬರುತ್ತದೆ! ವಸಂತ ಆಗಮಿಸಿದರೆ ಕೋಗಿಲೆಗೆ ಕಂಠ ಬರುತ್ತದೆ. ಯಾವ ಸಂಗೀತ ಶಾಲೆಗೂ ಹೋಗಬೇಕಾಗಿಲ್ಲ ಕೋಗಿಲೆ. ಹಾಡಲು ಅರಿಯದು, ಮೌನವಾಗಿತ್ತು. ಒದು ದಿನ ವಸಂತ ಅದೃಶ್ಯವಾಗಿ ನಿಸರ್ಗದಲ್ಲಿ ಸರಿದು ಬಂತು. ಗಿಡ ಮರಗಳು ಚಿಗುರಿದವು. ಸುವಾಸನೆ ಹರಡಿಕೊಂಡಿತು. ಯಾರಿಗೂ ಗೊತ್ತಿಲ್ಲ, ವಸಂತ ಹೇಗೆ ಬಂತು, ಎಲ್ಲಿಂದ ಬಂತು! ಆದರೆ ಕೋಗಿಲೆಗೆ ಗೊತ್ತಾಯಿತು. ಅದಕ್ಕೆ ವಸಂತ ಅಮಲೇರಿತು. ಹಾಡಲಿಕ್ಕೆ ಪ್ರಾರಂಭ ಮಾಡಿತು! ಮೊಟ್ಟ ಮೊದಲನೆಯ ನಿಸರ್ಗೋನ್ಮಾದ ಗೀತೆ ಜಗತ್ತಿಗೆ ಹುಚ್ಚು ಹಿಡಿಸಿತ್ತು. ಅಂತಹ ಗೀತೆ ಹಾಡಿತ್ತು ಕೋಗಿಲೆ! ಯಾವ ಸಾಧನೆ ಮಾಡಿದ್ದಲ್ಲ. ತಪಸ್ಸು ಮಾಡಿದ್ದಲ್ಲ. ವಸಂತ ಹಾಗೆ ಮಾಡಿಸಿತ್ತು. ಹಾಗೆ ಸಾಧಕನು ಆತ್ಮಗಾನ ಮಾಡಬೇಕು. ಅದು ಕಲಿತರೆ ಬರುವುದಿಲ್ಲ. ಜ್ಞಾನ-ಸಾಮಗಾನ ಅಂತರಂಗದಿಂದ ಹೊರ ಹೊಮ್ಮಬೇಕು. ಅದಕ್ಕಾಗಿ ತಪಸ್ಸು ಅವಶ್ಯವಿಲ್ಲ. ಅಪಾರ ಪಾಂಡಿತ್ಯ ಬೇಕಿಲ್ಲ. ಗುರು ಎನ್ನುವ ವಸಂತ ಸುಳಿದು ಬರಬೇಕು. ಆಗ ಸುತ್ತಮುತ್ತೆಲ್ಲಾ ಬ್ರಹ್ಮದ ಸುವಾಸನೆ ಹರಡುತ್ತದೆ. ಅದನ್ನು ಆಸ್ವಾದಿಸಿದ ಸಾಧಕನ ಶ್ರದಾಪೂರ್ಣ ಹೃದಯ ಹಾಡಲು ಆರಂಭಿಸುತ್ತದೆ. ಆತ್ಮಗಾನ ಮಾಡುತ್ತದೆ.

**ಗು**ರು ಶಿಷ್ಯರ ಪವಿತ್ರ ಸಂಬಂಧ ಅನಿವಾರ್ಯ-ಆನಂದೋನ್ಮಾದಕ್ಕೆ ಆತ್ಮಗಾನಕ್ಕೆ. ಗುರು ವಿದ್ಯೆಯನ್ನು ನೀಡಬೇಕು. ಶಿಷ್ಯ ವಿದ್ಯೆಯನ್ನು ಸ್ವೀಕರಿಸಬೇಕು! ತಾಯಿ ಹಾಲುಣಿಸಬೇಕು. ಮಗು ಸಂತಸದಿಂದ ಹಾಲು ಕುಡಿದು ಸುಖಿಸಬೇಕು.

**ಯಾ**ರ ಹೃದಯದಲ್ಲಿ ದ್ವೇಷವಿಲ್ಲ. ಯಾರ ಹೃದಯದಲ್ಲಿ ಆಸೆ ಆಮಿಷಗಳಿಲ್ಲ, ಅಂಥ ಮಹಾನುಭಾವನೇ ಗುರು, ಆಚಾರ್ಯ. ಭಗವತ್ ಕ್ಷೇತ್ರದಲ್ಲಿ ಪ್ರವೇಶಿಸಬೇಕಾದರೆ ಅಂಥ ಆಚಾರ್ಯನ ಸನ್ನಿಧಾನ ಅತ್ಯಪೇಕ್ಷಣೀಯ.

*ಮಡಕೆಯ ಮಾಡುವಡೆ ಮಣ್ಣೇ ಮೊದಲು*
*ತೊಡಿಗೆಯ ಮಾಡುವಡೆ ಹೊನ್ನೇ ಮೊದಲು*
*ಶಿವಪಥವನರಿವಡೆ ಗುರುಪಥವೇ ಮೊದಲು*
*ಕೂಡಲಸಂಗಮದೇವರನರಿವಡೆ*
*ಶರಣರ ಸಂಗವೆ ಮೊದಲು.*

**ಮ**ಣ್ಣು ಇರದೆ ಮಡಕೆ ಆಗದು. ಹೊನ್ನು ಇರದೆ ಆಭರಣ ಆಗದು. ಶ್ರೇಷ್ಠ ಆಚಾರ್ಯರ ಸಂಗ ಇರದೆ ಭಗವಂತನ ಸಾನ್ನಿಧ್ಯ ಸಿಗದು. ಅಷ್ಟು ಅವಶ್ಯ.

**ಬೃ**ಹದಾರಣ್ಯಕ ಉಪನಿಷತ್ತಿನಲ್ಲಿ ಒಂದು ಕಥೆ. ಒಬ್ಬ ಮನುಷ್ಯ ದಾರಿಯಲ್ಲಿ ಹೋಗುತ್ತಿದ್ದ. ಆತನ ಹತ್ತಿರ ಒಂದಿಷ್ಟು ಸಂಪತ್ತು, ದಾರಿ ನಿರ್ಜನ. ಅಲ್ಲಿ ಡಕಾಯಿತರು ಬಂದರು. ಸಂಪತ್ತನ್ನೆಲ್ಲಾ ಕಸಿದುಕೊಂಡರು. ಆ ಬಳಿಕ ಸುಮ್ಮನೆ ಬಿಟ್ಟು ಬಿಡಲಿಲ್ಲ. ಕಣ್ಣು ಕಟ್ಟಿ, ಆತನನ್ನು ದಟ್ಟವಾದ ಅರಣ್ಯದಲ್ಲಿ ಬಿಟ್ಟರು. ಯಾರೂ ಇಲ್ಲ. ಭಯಂಕರವಾದ ಅರಣ್ಯ. ಕಣ್ಣು ಕಾಣದು. ಕೈ ಕಟ್ಟಿದ್ದಾರೆ. ಇಂಥ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಪರಿಸ್ಥಿತಿಯೊಳಗೆ ಆ ವ್ಯಕ್ತಿ ಎಷ್ಟು ತಳಮಳಿಸುತ್ತಾ ಇರಬೇಡ? ಆತ ಪಾರಾಗುವುದು ಹೇಗೆ? ಭಗವಂತನನ್ನು ಪ್ರಾರ್ಥಿಸಿದ. ಅಲ್ಲಿಗೆ ಒಬ್ಬ ವ್ಯಕ್ತಿ ಬಂದ, ಶ್ರೇಷ್ಠ ಸಂತ ಬಂದ, ಅನಿಮಿತ್ತ ಬಂಧುವಾಗಿ ಬಂದ. ಕರುಣಾಪೂರ್ಣ ನಾದ ಶ್ರೇಷ್ಠಜ್ಞಾನಿ ಬಂದ. ನೋಡಿದ. ಕಣ್ಣು ಕೈ ಬಿಚ್ಚಿದ. 'ಈ ದಾರಿಯಿಂದ ನೀನು ಹೋಗು' ಎಂದು ದಾರಿ ತೋರಿದ.

**ಹಾ**ಗೆ ಬದುಕು ಒಂದು ಕಾಡು. ವಿಸ್ತಾರವಾಗಿದೆ. ದಟ್ಟವಾಗಿದೆ. ಇಂಥಲ್ಲಿ ನಮ್ಮನ್ನು ಯಾರೋ ತಂದು ಬಿಟ್ಟಿದ್ದಾರೆ! ನಾವು ಕಣ್ಣು ತೆರೆದಾಗ ಕಂಡದ್ದು ಒಂದು ಮನೆ, ತಂದೆ, ತಾಯಿ, ಮೈಸೂರು ಪಟ್ಟಣ. ಇಂದು ಏನಾಗಿದೆ ಗೊತ್ತಿಲ್ಲ, ಮುಂದೆ ಏನಾಗಲಿದೆ ತಿಳಿಯದು. ಎಲ್ಲಿಗೆ ಪಯಣ? ಅರಿಯದು. ನಾವು ಕಲಿತಿರಬಹುದು. ಗಳಿಸಿರಬಹುದು. ಆದರೇನು ಬಾಳಿನ ಹಿಂದು ಮುಂದಿನದು ನಮಗೆ ಕಾಣದು; ತಿಳಿಯದು. ತಿಳಿದವರು ನಮಗೆ ಸಂಧಿಸಿಲ್ಲ, ಉಳಿದವರೆಲ್ಲ ಕಣ್ಣು ಕೈ ಕಟ್ಟಿಸಿಕೊಂಡವರೇ. ಎಲ್ಲರೂ ಇದೇ ಸಾಂಸಾರಿಕ ಘೋರ ಕಾನನದಲ್ಲಿ ಸಿಲುಕಿದವರೇ.

**ಇಂ**ಥ ಸ್ಥಿತಿಯಲ್ಲಿ ಯಾರು ನಮ್ಮ ಕಣ್ಣು ಬಿಚ್ಚುತ್ತಾರೆ, ಯಾರು ನಮ್ಮ ಮಾರ್ಗವನ್ನು ನಿಖರವಾಗಿ ತೋರಿಸುತ್ತಾರೆ, ನಾವೆಲ್ಲಿ ಇದ್ದೇವೆ ಎನ್ನುವುದನ್ನು ತಿಳಿಸಿಕೊಡುತ್ತಾರೆ, ಅವರೇ ಆಚಾರ್ಯರು. **'ಆಚಾರ್ಯವಾನ್ ಪುರುಷೋ ವೇದ'** ಯಾರಿಗೆ ಇಂತಹ ಆಚಾರ್ಯಕರು ಸಿಕ್ಕುವರೋ ಅವರು ತಿಳಿದುಕೊಳ್ಳುತ್ತಾರೆ. ರಾತ್ರಿ ದೀಪ, ಹಗಲು ಸೂರ್ಯ, ಕಣ್ಣಿನೊಳಗೆ ಕಾಂತಿ, ಮನಸ್ಸಿನಲ್ಲಿ ಜ್ಞಾನದ ಜ್ಯೋತಿ ಇರದೇ ಇದ್ದರೆ ಜಗತ್ತು ನಮಗೆಲ್ಲಿ ಕಾಣುತ್ತಿತ್ತು? ಹೊರಗೆ ಒಂದು ಸೂರ್ಯ ಮಿನುಗುತ್ತಿದೆ. ಒಳಗೆ ಜ್ಞಾನದ ಚಂದ್ರ ಮೂಡಿದ್ದಾನೆ ಎಂದೇ ಹೊರಗಿನ ಜಗತ್ತು ಹಾಗೂ ಅಂತರಂಗದೊಳಗಿನ ಭಾವನೆಗಳು, ವಿಚಾರಗಳು ಕಾಣುತ್ತವೆ. ಈ ಸೂರ್ಯ ಆಚಾರ್ಯ! ಈ ಅಂತರಂಗದೊಳಗಿರುವ ಜ್ಞಾನವೇ ಆಚಾರ್ಯ! ಕಣ್ಣು ತೆರೆಸಬಲ್ಲ ಯಾವುದೇ ವ್ಯಕ್ತಿ ಈ ಜಗತ್ತಿನೊಳಗಿರಲು, ಯಾವ ಜಾತಿ, ಮತ ಪಂಥದವನೇ ಇರಲಿ, ಆತ ಶ್ರೇಷ್ಠ ಆಚಾರ್ಯ! ಅರಣ್ಯದೊಳಗೆ ಕಣ್ಣು ಬಿಚ್ಚಿದವ ಕರುಣಾಳು. ಯಾವ ಜಾತಿ, ಗೋತ್ರ, ಭಾಷೆಯವನಾದರೇನು? ಹಾಗೆ ಗುರು!

**ಆ**ಚಾರ್ಯ ನಮ್ಮ ಬದುಕಿನಲ್ಲಿ ಪ್ರವೇಶಿಸಿದನೆಂದರೆ ಭಗವತ್ ಚಿಂತನೆ ತನ್ನಷ್ಟಕ್ಕೆ ತಾನೇ ಆರಂಭವಾಗುತ್ತದೆ. ಅಲೆಗ್ಸಾಂಡರ್ ಬಹಳ ವೀರ, ಶೂರ, ಸಣ್ಣವಯಸ್ಸಿನೊಳಗೆ ಆಗಿನ ಕಾಲದ ಸಮಸ್ತ ಜಗತ್ತೆಲ್ಲವನ್ನೂ ಗೆಲ್ಲುವ ಆಕಾಂಕ್ಷೆ ಹೊಂದಿದ್ದ. ಅದನ್ನು ಹೆಚ್ಚು ಕಡಿಮೆ ಪೂರೈಸಿಕೊಂಡಿದ್ದ. ಅವನ ಹತ್ತಿರ ಒಬ್ಬ ದೊಡ್ಡ ಮನುಷ್ಯ ಬಂದು ಕೇಳುತ್ತಾನೆ. ''ಅಲೆಗ್ಸಾಂಡರ್ ಪ್ರಭುಗಳೇ, ನಿಮ್ಮ ಗುರುಗಳಾದ ಅರಿಸ್ಟಾಟಲರಿಗೆ ಅಷ್ಟೊಂದು ಗೌರವ ಕೊಡುತ್ತಿದ್ದೀರಲ್ಲ, ನಿಮ್ಮ ತಂದೆ ಮಹಾರಾಜರು. ಅವರಿಗಿಂತ ಮನ್ನಿಸುತ್ತಿದ್ದೀರಲ್ಲಾ ಏಕೆ? ತಂದೆ ನಿಮಗೆ ಸಾಮ್ರಾಜ್ಯವನ್ನೇ ಕೊಟ್ಟ, ನಿಮ್ಮನ್ನು ಅಜೇಯ ರಾಜನನ್ನಾಗಿಸಿದ. ಅವರು ಪೂಜಾಯೋಗ್ಯ. ಆ ಸಾಮಾನ್ಯ ನಾದ ಅರಿಸ್ಟಾಟಲ್‌ನಲ್ಲಿ ಅದೇಕೆ ಅಷ್ಟು ಪೂಜ್ಯತೆ?'' ಅಲೆಗ್ಸಾಂಡರ್ ಹೇಳುತ್ತಾನೆ :

"I obtained from my father a body, a life perishable. But from my preceptor I obtained the life imperishable. My father brought me to the earth from the heaven, and my preceptor Aristotle took me from this earth to the heaven.''

''ತಂದೆಗಿಂತ ಹೆಚ್ಚು ಗೌರವಿಸಲು ಎರಡು ಕಾರಣಗಳಿವೆ. ತಂದೆಯಿಂದ ನಾನು ದೇಹವನ್ನು ಪಡೆದೆ. ಆದರೆ ಇದು ನಾಶವಾಗುವಂತಹ ದೇಹ. ಅರಿಸ್ಟಾಟಲ್ ಗುರುವಿನಿಂದ ನಾನು ಅಮರ ಜೀವನವನ್ನು ಪಡೆದೆ. ನನ್ನ ತಂದೆ ಆಕಾಶದಿಂದ ಭೂಮಂಡಲಕ್ಕೆ ನನ್ನ ತಂದಿಟ್ಟ, ನನ್ನ ಗುರು ನನ್ನನ್ನು ಭೂಮಿಯಿಂದ ಆಕಾಶದ ಎತ್ತರಕ್ಕೆ ಏರಿಸಿಬಿಟ್ಟ! ಯಾರಿಗೆ ಹೆಚ್ಚು ಪೂಜ್ಯಸ್ಥಾನವೀಯಬೇಕು, ನೀನೇ ಹೇಳು.''

**ಭೂ**ಮಿ ಬಿಡಿಸಿ ಆಕಾಶದೆತ್ತರಕ್ಕೇರಿಸುವವರು ಆಚಾರ್ಯರು! ಬದುಕಿನಲ್ಲಿ ಅಮೃತಭಾವ ತುಂಬುವವರು ಆಚಾರ್ಯರು! ಆದ್ದರಿಂದಲೆ **''ವರಾನ್ ಪ್ರಾಪ್ಯ ನಿಬೋಧತ'', ''ಆಚಾರ್ಯ ವಾನ್ ಪುರುಷೋ ಭವ''** ಎಂಬ ಅಪರೂಪದ ಆದೇಶಗಳು. ಜೀವನದೊಳಗೆ ಭಗವಂತ ಸಿಗದಿದ್ದರೂ ಚಿಂತೆ ಬೇಡ. ಒಬ್ಬ ಮಹಾನುಭಾವನ ಸಂಗ ಮಾಡು ಸಾಕು. ಆಚಾರ್ಯವಾನ್ ಆಗು. ಗುರುವನ್ನು ತಿರಸ್ಕರಿಸಿ ಶ್ರೇಯ ಪಡೆಯಲೆಳಸಿದರೆ ಅದು ಅಸಾಧ್ಯದ ಮಾತು.

**ತಾ**ಯಿ ಮೊದಲ ಗುರು. ಬದುಕಿಗಿಳಿದ ಒಡನೆಯೇ ಮನೆಯೇ ಮೊದಲ ಪಾಠಶಾಲೆ! ನಾಲ್ಕು ಜನ ಕಲಿಸುವವರು, ನಾವೊಬ್ಬರೇ ಕಲಿಯುವವರು. ಹೇಗಿರಬೇಕು ಈ ಶಾಲೆ! ಎಲ್ಲ ಉಚಿತ. ತಾಯಿ ತಿನಿಸಿ, ಉಣಿಸಿ, ತಣಿಸಿ ಪಾಠ ಹೇಳುವವಳು. ಪುಸ್ತಕವಿಲ್ಲ ಅಭ್ಯಾಸಕ್ಕೆ. ಪಠ್ಯವಿಲ್ಲ. ಹತ್ತು ವರುಷ ಕಲಿಸಿದರೂ ಅಳವಡದ ಭಾಷೆಯನ್ನು ವರುಷದಲ್ಲಿ ಕಲಿಸಿದಳು. ಆದ್ದರಿಂದಲೇ ಮನೆಯೇ ಮೊದಲ ಶ್ರೇಷ್ಠ ಪಾಠಶಾಲೆ. ತಾಯಿಯೇ ಅದರ ಮೊದಲ ಗುರು! ದೊಡ್ಡವನಾದ ಮೇಲೆ ಹಲವು ಮಂದಿ ಗುರುಗಳು. ಜ್ಞಾನವನ್ನು ಕೊಟ್ಟರು, ಲೌಕಿಕ ಜೀವನಕ್ಕೆ ಆಸರೆ ನೀಡಿದರು! ಅವರಿಗೆಲ್ಲ ಕೃತಜ್ಞವಾಗಿರಬೇಕು. ಆದರೆ ಇಷ್ಟೇ ವಿದ್ಯೆ ಸಾಕಾಗದು ಬದುಕು ದಿವ್ಯವಾಗಲು! ೮೦ ವರ್ಷ-೯೦ ವರ್ಷ ಬದುಕುತ್ತೇವೆ. ಆದರೆ ತೃಪ್ತಿ ಸಿಗಲಿಲ್ಲ ಏಕೆ? ಅಂಥ ತೃಪ್ತಿಕಲೆಯ ಕಲಿಸುವ, ಸಮಾಧಾನದ ವಿದ್ಯೆ ನೀಡುವ ಗುರುವರ್ಯನನ್ನು ನಾವು ಸಂಧಿಸಿಲ್ಲ; ಆ ಗುರುವನ್ನು ಶೋಧಿಸುವುದು ಮೊದಲ ಕಾರ್ಯ. ಒಬ್ಬ ಜ್ಞಾನಿ ಮಹಂತನನ್ನು ಹುಡುಕುವುದು ಅತ್ಯವಶ್ಯ. ಅವಸರವಸರವಾಗಿ ಅಲ್ಲ; ಶೋಧಿಸಬೇಕು ತಾಳ್ಮೆಯಿಂದ.

**ಯು**ವಕನು ಯೋಗ್ಯ ವಧುವಿಗಾಗಿ ಅದೆಷ್ಟು ಹುಡುಕುತ್ತಾನೆ! ಮನಸ್ಸು ಒಪ್ಪುವವರೆಗೆ ಶೋಧಿಸುತ್ತಾನೆ. ಲೌಕಿಕ ಬದುಕಿಗಾಗಿ ಇಷ್ಟು ಶೋಧ; ಇನ್ನು ಅಲೌಕಿಕ ಬದುಕಿಗಾಗಿ ಅದೆಷ್ಟು ಶೋಧ ಮಾಡಬೇಕಾದೀತು! ಗುರುವನ್ನು ಹುಡುಕುವಲ್ಲಿ ಸ್ವಲ್ಪ ಸಮಯ ವ್ಯಯವಾದರೂ ಸರಿಯೇ. ಒಮ್ಮೆ ಸುಯೋಗ್ಯ, ಪವಿತ್ರ ಬಾಳಿನ ಗುರು ದೊರೆತರೆ ಸಾಕು; ಜೀವನ ಸಫಲವಾದಂತೆಯೇ.





ಒಂದು ಹರಿವ ಹೊಳೆ, ಒಂದು ಹರಡಿದ ಗಿಡ, ಎತ್ತರದ ಬೆಟ್ಟ, ಸುಂದರವಾದ ವಿಸ್ತರಿಸಿದ ನಿಸರ್ಗ, ಅನಂತವಾದ ಆಕಾಶ ಕೂಡ ಗುರುವಾಗಬಹುದು. ಜ್ಞಾನಜ್ಯೋತಿ ಹೊತ್ತಲು ಯಾವುದು ಕಾರಣವಾದೀತೋ ಅದು ಗುರುವೇ. ಇಷ್ಟೇ ವಸ್ತು-ಗುರುಗಳಿಂದ ನಾವು ಕಲಿತುಕೊಳ್ಳಬೇಕಾಗುತ್ತದೆ. ಮಾನವ ಗುರುವು ಹಾಗಲ್ಲ, ಆತ ನಮಗವಶ್ಯವಾದ ಆತ್ಮಜ್ಞಾನ ವನ್ನು ಧಾರೆಯೆರೆಯುತ್ತಾನೆ. ಆದ್ದರಿಂದ ಮಾನವ ಗುರುವಿನ ಮಹತಿ! ಆತ ಸಿಕ್ಕುವುದಾದರೆ ಮುಕ್ತಿಗಾಗಿ, ಸತ್ಯ ದರ್ಶನಕ್ಕಾಗಿ ಆಲೋಚಿಸಬೇಕಿಲ್ಲ.

ಅಲ್ಲಮ ಜ್ಞಾನಿ, ಆತ ಮದ್ದಳೆ ಬಾರಿಸಿದ, ಮಾಯೆ ಕುಣಿದಳು. ನಮ್ಮ ಸ್ಥಿತಿ ಅದಕ್ಕೆ ವಿರುದ. ಮಾಯೆ ಬಾರಿಸುತ್ತಾಳೆ. ನಾವು ಕುಣಿಯುತ್ತೇವೆ. ಆತ ವಿರಾಗಮೂರ್ತಿ. ಮಾಯಾಂತರ! ಆತನ ಒಂದು ವಚನ ನೋಡಿ.

*ಉಪಾಧಿಕ ಮನವು, ಉಪಾಧಿರಹಿತ ಮನವು*
*ನಿಂದಲ್ಲಿ(ಯೇ) ನಿವಾತವಾಯಿತ್ತು. ಆನಂದಭಾವವು*
*ಬಂದು ತಾನಳಿದು ನಿಂದಲ್ಲಿ(ಯೇ) ನಿವಾತವಾಯಿತ್ತು*
*ಲಿಂಗೋದಯ ಪ್ರಜ್ವಲಿಸುತ್ತಿದೆ*
*ಗುಹೇಶ್ವರ(ನೆಂಬ) ಲಿಂಗವು ತಾನೆಯಾಗಿ*

ಇಲ್ಲಿ ನಮ್ಮನ್ನು ವರ್ಣಿಸಿದ್ದಾನೆ. ಸಂತರನ್ನು ವರ್ಣಿಸಿದ್ದಾನೆ. ಸಾಧನೆಯನ್ನು ಕುರಿತು ಹೇಳಿದ್ದಾನೆ. ಕೊನೆಗೆ ನಮ್ಮ ಅನುಭವ ಏನು ಉಂಟಾದೀತು ಅನ್ನುವುದನ್ನು ಸುಂದರ ಶಬ್ದಗಳಲ್ಲಿ ವರ್ಣಿಸಿದ್ದಾನೆ ಅಲ್ಲಮ. ಉಪಾಧಿಕ ಮನಸ್ಸು, ಉಪಾಧಿಯ ಭಾವನೆಗಳ ಮನಸ್ಸು ನಮ್ಮೆಲ್ಲರದು! ನಮ್ಮ ಮನಸ್ಸಿನಲ್ಲಿ ಪ್ರಪಂಚ ತುಂಬಿದೆ, ಹೊರಗಿನದಕ್ಕಿಂತ ಹೆಚ್ಚು ದಟ್ಟವಾಗಿ! ತಿಜೋರಿಯ ಹಣ ಉಪಾಧಿ. ಅದರ ಭಾವ ಒಳಗಿದೆ. ಉಪಾಧಿಕವದು. ಹೊರ ಹಣ ಸಂಸಾರವಲ್ಲ, ಒಳ ಭಾವ ಸಂಸಾರ!

**ಹೆಂ**ಡತಿ, ಮಕ್ಕಳು, ಮನೆ, ಅಧಿಕಾರ ಎಲ್ಲ ಹೊರಗಿವೆ. ಅವುಗಳ ಮಮ ಭಾವ ಒಳಗೆ! ಹೊರಗಿನದು ಭಾರವಲ್ಲ, ಒಳಗಿನದು ಭಾರ. ನಾವು ಮನಸ್ಸನ್ನು ಡಸ್ಟ್‌ಬಿನ್ ಮಾಡಿದ್ದೇವೆ. ಯಾವುದನ್ನು ಸಂಗ್ರಹಿಸಬಾರದೋ ಅದನ್ನೆಲ್ಲ ಅದರಲ್ಲಿ ಚೆಲ್ಲಿದ್ದೇವೆ, ಹಾಕಿದ್ದೇವೆ.

ಏನೇನು ಜನರಿಗೆ ಬೇಡಾಗಿರುತ್ತದೆ ಅದನ್ನೆಲ್ಲಾ ಹಾಕುತ್ತಾರೆ ಬುಟ್ಟಿಗೆ. ಕಸದ ಬುಟ್ಟಿಯೊಳಗೆ ಒಳ್ಳೆಯ ವಸ್ತುವನ್ನು ಯಾರಾದರೂ ಹಾಕಿಯಾರೆ? ನಮ್ಮ ಮನೆಯೊಳಗೆ ಏನೇನು ಬೇಡವಾಗಿದೆ ಅದನ್ನು ತಂದು ಅಲ್ಲಿ ಹಾಕುತ್ತೇವೆ, ಆ ಬುಟ್ಟಿಗೆ. ಅಭಿಮಾನ, ತಾನು ತುಂಬಿದವನೆಂದು, ಉಳ್ಳ ಸಿರಿವಂತನೆಂದು! ಆದರೆ ಅದರಲ್ಲಿ ಏನಿದೆ? ಬರಿ ಕಸ. ಹಾಗೆ ನಾವು ಕೆಲಸಕ್ಕೆ ಬಾರದ ಸಾವಿರಾರು ಆಲೋಚನೆಗಳನ್ನು ತಲೆಯಲ್ಲಿ ತುಂಬಿಕೊಂಡಿದ್ದೇವೆ. ಉಪಯುಕ್ತವಾದ ಸಂಗತಿಗಳನ್ನೂ ಅದರಲ್ಲಿ ಚೆಲ್ಲಿದ್ದೇವೆ. ಇದು ಉಪಾಧಿಕ ಮನಸ್ಸು, ಶ್ರೀಮಂತ ಕಸದ ಬುಟ್ಟಿ! ಅದರಲ್ಲಿ ಗೀತೆಯ ಮಂತ್ರಗಳೂ ಇವೆ; ಪರದೂಷಕ ಮಾತುಗಳೂ ಇವೆ.

**ಡ**ಸ್ಟ್‌ಬಿನ್‌ನಲ್ಲಿ ಸಾಮಾನ್ಯವಾಗಿ ಕೆಟ್ಟದೇ ಇದೆ. ಮನಸ್ಸಿನಲ್ಲಿ ಹಾಗಲ್ಲ, ಅದರಲ್ಲಿ ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ಎಲ್ಲ ಕೆಟ್ಟದ್ದರೆ ಸಂಪೂರ್ಣ ಚೆಲ್ಲಿಬಿಡಬಹುದು. ಎಲ್ಲ ಒಳ್ಳೆಯದಿದ್ದರೆ ಚೆಲ್ಲದೇ ಇರಬಹುದು. ಆದರೆ ಹಾಗಿಲ್ಲ. ಚೆಲ್ಲಲೂ ಬಾರದು ಪೂರ್ತಿ, ಉಳಿಸಲೂ ಬಾರದು ಎಲ್ಲ, ಉಪಾಧಿಕ ಮನಸ್ಸೇ ಹೀಗೆ, ಒಂದು ಬಗೆಯ ಮಿಶ್ರಣ.

**ಉ**ಪಾಧಿ ವಿರಹಿತ ಮನಸ್ಸು-ಉಪಾಧಿಗಳ ಚೆಲ್ಲಿ ಹಗುರಾದ ಮನಸ್ಸು, ಖಾಲಿಯಾದ ಮನಸ್ಸು. ಮನುಷ್ಯ ಗೃಹಸ್ಥನಾಗಿ ನಿಂತಿರಲಿ, ಸನ್ಯಾಸಿಯಾಗಿ ಬಾಳುತ್ತಿರಲಿ, ಆತ ಎಲ್ಲಿ ಅಂದರೆ ಯಾವ ಆಶ್ರಮದಲ್ಲಿ ನಿಂತಿದ್ದಾನೆಯೋ ಅಲ್ಲಿ ನಿವಾತವಾಗಬೇಕು. ಅಂದರೆ ಮನಸ್ಸನ್ನು ಬರಿದಾಗಿಸಬೇಕು. ಆಗ ಅದು ನಿರಾಭಾರವೂ ಶಾಂತವೂ ಆಗುತ್ತದೆ.

**ಮ**ನಸ್ಸನ್ನು ಖಾಲಿ ಮಾಡುವುದು ಅಷ್ಟು ಕಠಿಣವಲ್ಲ. ಮುನಿಸಿಪಲ್ ಕಸದ ಕುಂಡಲ, ಬುಡವಿರದು. ಎತ್ತಿದರೂ ಸಾಕು, ಅದು ಬರಿದಾಗುತ್ತದೆ! ತುಂಬಲು ನೂರು ದಿನ, ಬರಿದಾಗಿಸಲು ಒದು ಕ್ಷಣ.

**ನಾ**ವು ಲೌಕಿಕರು ಎನ್ನುವ ಭಾವನೆಯನ್ನೂ ಬಿಡಬೇಕು; ನಾವು ಸನ್ಯಾಸಿಗಳೆಂಬ ಕಲ್ಪನೆಯನ್ನೂ ತ್ಯಜಿಸಬೇಕು. ಉಪಾಧಿಕ ಹಾಗೂ ನಿರೂಪಾಧಿಕ ಎಂಬ ಎರಡೂ ಭಾವ ಹೊರಗೆ ಸುರಿದುಬಿಡಬೇಕು! ಅದು ನಿವಾತವಾಗುವಿಕೆ! ನೀವು ಸನ್ಯಾಸಿಯಾಗಬೇಕಿಲ್ಲ. ನಾನು ಗೃಹಸ್ಥನಾಗಬೇಕಿಲ್ಲ. ಎಲ್ಲಿ ನಾವಿದ್ದೇವೆಯೋ ಅದರ ಭಾವ ತ್ಯಜಿಸುವುದು ನಿವಾತ ಸ್ಥಿತಿ.

**ನಿ**ವಾತ ಆದ ಬಳಿಕ ಆನಂದ ಉಂಟಾಗುತ್ತದೆ; ಆನಂದದ ಭಾವಬಿಂದು ತಾನು ಉಳಿಯುತ್ತದೆ. ಎಲ್ಲ ಬರಿದು ಮಾಡಿದ ಮೇಲೆ ಆನಂದ ಉಂಟಾಗುತ್ತದೆ! ಪ್ರವಾಸ ಮಾಡಿ ಬಂದಾಗ ಮೈಯೆಲ್ಲ ಧೂಳು, ಬಟ್ಟೆಯೆಲ್ಲ ಕೊಳೆ. ಮನೆಗೆ ಬಂದು ಬಟ್ಟೆ ತೆಗೆದೊಗೆದು ಸ್ನಾನ ಮಾಡಿದರೆ ಎಷ್ಟು ನೆಮ್ಮದಿ! ಏಕೆ? ಧೂಳಿನ ಬಟ್ಟೆ ತೆಗೆದು ಹಾಕಿದೆವು. ಆದ್ದರಿಂದ ಆನಂದ.

**ಹಾ**ಗೆ ಈ ಪ್ರಪಂಚದ ಕೊಳೆ ಹತ್ತಿದ ಮನಸ್ಸನ್ನು ತೊಳೆದು ಬಿಟ್ಟರೆ ಆನಂದ ಉಂಟಾಗುತ್ತದೆ. ಈ ಆನಂದದ ಭಾವಬಿಂದು ಬಹಳ ಸೂಕ್ಷ್ಮ. ಆನಂದದ ಭಾವಬಿಂದುವಷ್ಟೇ ಉಳಿಯಬೇಕು. ಏಕೆ ಆನಂದವಾಯಿತು ಎನ್ನುವುದು ಉಳಿಯಬಾರದು. ಇದನ್ನು ಬಿಟ್ಟೆ, ಅದರಿಂದ ಆನಂದವಾಗಿದೆಯೆಂಬ ಭಾವ ಕೂಡ ಬೇಡ.

**ಅ**ಳಿದು ನಿಂದಲ್ಲಿ ನಿವಾತವಾಯಿತ್ತು ನೋಡ! ಮನುಷ್ಯನ ಮನಸ್ಸು ಬರಿದಾದಾಗ ಕೇವಲಾನಂದ. ಆಗ ಹೃದಯದಲ್ಲಿ ಅರುಣೋದಯ. ಅಂತರಂಗದೊಳಗೆ ಭಗವಂತನ ಬರುವಿಕೆಯ ಮುಂಚಿನ ಒಂದು ಹೃದ್ಯ ವಾತಾವರಣ. ಅದು ಆಧ್ಯಾತ್ಮಿಕ ಅರುಣೋದಯ. ಆನಂತರ ಜ್ಞಾನ ಸೂರ್ಯ ಪ್ರಜ್ವಲಿಸಿ ಬರುತ್ತಾನೆ!

**ಅ**ದೇ ಗುಹೇಶ್ವರ ನೋಡಾ. ಆ ಜ್ಞಾನ ದೇವನೇ ಗುಹೇಶ್ವರ, ಭಗವಂತ. ಆತನನ್ನು ಈ ರೀತಿ ಬರಮಾಡಿ ಕೊಳ್ಳುವುದೇ ಭಗವತ್ ಚಿಂತನ! ಇಂತಹ ಭಗವತ್ ಚಿಂತನೆ ಗಾಗಿ ಮೊಟ್ಟ ಮೊದಲ ಕೆಲಸ– ಒಬ್ಬ ಶ್ರೇಷ್ಠ ಆಚಾರ್ಯರನ್ನು ಕಾಣುವುದು. ಶಿಷ್ಯತ್ವ ಹೊಂದುವುದು. ಗುರುಗಳಿಂದ ಬೇರೆ ಏನನ್ನೂ ಪ್ರತೀಕ್ಷಿಸದೆ ಆತ್ಮವಿದ್ಯೆಯನ್ನು ಪಡೆಯುವುದು. ಆಗ ಆತ್ಮಗಾನ! ಆತ್ಮಾನಂದ!

■

# ಜನತೆಯ ಹೃದಯ ಸಿಂಹಾಸನಾಧೀಶ್ವರರು

**ಶ್ರೀ ಸುತ್ತೂರು ಜಗದ್ಗುರು**
**ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು**



**ಪೂ**ಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ತಪೋನುಷ್ಠಾನ ಹಾಗೂ ಸಮಾಜಸೇವೆಯ ಮೂಲಕ ಜನಮಾನಸದಲ್ಲಿ ಶಿವಪರವಾದ ಸಂಚಲನವನ್ನು ಮೂಡಿಸಿದ್ದಾರೆ. ನಾಡಿನ ಎಲ್ಲ ಮಠಾಧಿಪತಿಗಳಿಗೂ ಹಿರಿಯ ಸ್ಥಾನದಲ್ಲಿರುವ ಪರಮಪೂಜ್ಯರ ಸಾಧನೆಯ ಎತ್ತರ–ಬಿತ್ತರಗಳು ವೀರಶೈವ ಮಠಗಳ ಪರಂಪರೆಗೆ ಕಲಶಪ್ರಾಯವಾಗಿದೆ. ಅವರ ಪ್ರಭಾವಲಯಕ್ಕೆ ಬಂದ ಪ್ರತಿಯೊಬ್ಬರೂ ತಮ್ಮ ಅಂತರಂಗ ಬಹಿರಂಗಗಳನ್ನು ಬೆಳಗಿಕೊಂಡಿರುತ್ತಾರೆ. ಪೂಜ್ಯರ ವಿಚಾರಪ್ರಖರತೆ, ಆಚಾರನಿಷ್ಠೆ, ಸಮಾಜದ ಎಲ್ಲ ಸ್ತರದವರನ್ನೂ 'ಇವ ನಮ್ಮವ, ಇವ ನಮ್ಮವ'ನೆಂದು ಅಪ್ಪಿಕೊಳ್ಳುವ ಮಾತೃಹೃದಯ ವಾಙ್ಮನಕ್ಕೆ ಅತೀತವಾದುದು. ಪೂಜ್ಯರು ತಮ್ಮ ಸುದೀರ್ಘ ಸಾರ್ಥಕ ಬದುಕಿನಲ್ಲಿ ಸಿದ್ಧಗಂಗೆಯನ್ನು ಬೆಳೆಸಿದ ಪರಿ ಪವಾಡ ಸದೃಶ್ಯವಾಗಿದೆ. ಇದು ಅವರು ಮಾಡಿರುವ ಅಕ್ಷರದಾಸೋಹ ಮತ್ತು ಅನ್ನದಾಸೋಹದ ಕ್ರಾಂತಿಯಿಂದ ಆದ ಬೆಳವಣಿಗೆ. ೧೨ನೇ ಶತಮಾನದ ಶರಣರ ಸೈದ್ಧಾಂತಿಕ ನಿಲುವುಗಳು, ಸಾಮಾಜಿಕ ಆಂದೋಲನಗಳು ಸಿದ್ಧಗಂಗೆಯಲ್ಲಿ ಮತ್ತೊಮ್ಮೆ ಮೂರ್ತಿರೂಪ ಪಡೆದು ನಾಡಿನ ಎಲ್ಲ ಮಠಮಾನ್ಯಗಳ ಸೇವಾಕೈಂಕರ್ಯಗಳಿಗೆ ಸ್ಫೂರ್ತಿಯಾಯಿತು, ಮಾರ್ಗದರ್ಶಕವಾಯಿತು. ಇಂತಹ ಮಹಾಮಣಿಹದ ರೂವಾರಿಗಳಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕೇವಲ 'ಕರ್ನಾಟಕ ರತ್ನ'ರು ಮಾತ್ರವಲ್ಲ, ಅದಕ್ಕಿಂತ ಮಿಗಿಲಾಗಿ ನಾಡಿನ ಆಸ್ತಿಕ ಜನತೆಯ ಹೃದಯ ಸಿಂಹಾಸನಾಧೀಶ್ವರರೂ ಆಗಿದ್ದಾರೆ.

---

# ದೀನ–ದಲಿತರ ಭಾಗ್ಯದ ಬೆಳಕು

**ಪೂಜ್ಯ ಶ್ರೀ ಬಸವಲಿಂಗ ಪಟ್ಟದೇವರು**
**ಹಿರೇಮಠ ಸಂಸ್ಥಾನ, ಭಾಲ್ಕಿ**



ಸಿದ್ಧಗಂಗಾ ಮಹಾಶಿವಯೋಗಿಗಳಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕಾಲದಲ್ಲಿ ನಾವು ಬದುಕಿದ್ದೇ ನಮ್ಮ ಪುಣ್ಯ, ನಮ್ಮ ಹೆಮ್ಮೆ. ಅವರೊಬ್ಬ ಯುಗಪುರುಷರು. ಈ ಶತಮಾನದ ಒಂದು ಅದ್ಭುತ. ಬಸವಕಲ್ಯಾಣದ ಗತವೈಭವ ಕಾವ್ಯದಲ್ಲಿ ಓದಬೇಕಿಲ್ಲ. ವಚನಗಳಲ್ಲಿ ಓದಬೇಕಿಲ್ಲ. ಸಿದ್ಧಗಂಗಾ ಶ್ರೀ ಮಠಕ್ಕೆ ಹೋದಾಗ ಪ್ರತ್ಯಕ್ಷವಾಗಿ ಬಸವಕಲ್ಯಾಣ ಗತವೈಭವದ ದರ್ಶನವಾಗುತ್ತದೆ. ಮಹಾಮನೆಯ ದರ್ಶನವಾಗುತ್ತದೆ. ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮ ದಾಸೋಹವು ಪ್ರತ್ಯಕ್ಷ ಕಾಣುತ್ತದೆ.

ದೀನದಲಿತರ ಮತ್ತು ಅನಾಥ ಹೃದಯಿಗಳ ಶ್ರೀರಕ್ಷೆಯಾದ ಪೂಜ್ಯ ಶ್ರೀಗಳ ಕಾರ್ಯಸಾಧನೆ ವರ್ಣಿಸಲು ಶಬ್ದಗಳು ಸೋಲುತ್ತವೆ. ಗಡಿಯಾರವು ನಾಚಿಕೊಳ್ಳುವಂತಹ ಸಮಯ ಪರಿಪಾಲನೆ ಪೂಜ್ಯ ಶ್ರೀಗಳ ವೈಶಿಷ್ಟ್ಯಗಳಲ್ಲಿ ಪ್ರಮುಖವಾದ ಅಂಶವಾಗಿದೆ. ಬಸವ ಭಾಷೆಯಲ್ಲಿ ಹೇಳಬೇಕಾದರೆ ಜಗದಗಲ ಮುಗಿಲಗಲ ಮಿಗೆಯಗಲ ಅಪ್ಪಗಳ ಕಾರ್ಯಕ್ಷೇತ್ರವಾಗಿದೆ.

ಕನ್ನಡಿಗರ ಅಷ್ಟೇ ಅಲ್ಲ ಭಾರತೀಯರ, ವಿಶ್ವದ ಹೆಮ್ಮೆಯ ಅಪ್ಪಗಳಾಗಿದ್ದಾರೆ. ಶಿವಕಾರುಣ್ಯದ ಸಾಕಾರ ಸ್ವರೂಪವಾಗಿ ದೀನದಲಿತರ ಭಾಗ್ಯದ ಬೆಳಕಾಗಿದ್ದಾರೆ.







# ನೂರಹತ್ತರ ಹೊಸ್ತಿಲಲ್ಲಿ ಪ್ರಖರ ಚಿಂತಕ

**ಸಂದರ್ಶನ : ಗೊ.ರು. ಚನ್ನಬಸಪ್ಪ** *

* **ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ, ಮಠ–ಮಾನ್ಯಗಳು ತಮ್ಮ ಘನತೆ–ಗೌರವಗಳನ್ನು ಕಳೆದುಕೊಂಡಿವೆ ಎಂಬ ಮಾತಿಗೆ ಇದು ನಿಜವೇ ?**

**ಸ್ವಾಮೀಜಿ :** ನಿಜ. ಜನರಲ್ಲಿ ಈ ಭಾವನೆ ಕಂಡು ಬರುತ್ತಿದೆ. ಇದಕ್ಕೆ ಎರಡು ಕಾರಣ. ಒಂದು ಜನ ಸಮುದಾಯದಲ್ಲೇ ನಿಜವಾದ ಶ್ರದ್ಧಾ ಭಕ್ತಿಗಳು ಕುಂದುತ್ತಾ ಬಂದಿರುವುದು. ಮತ್ತೊಂದು ಮಠ–ಮಾನ್ಯಗಳ ನಿರ್ವಹಣೆಯ ಹೊಣೆ ಹೊತ್ತವರು ಆ ಸಂಸ್ಥೆಗಳ ಮೂಲ ಉದ್ದೇಶ ಮತ್ತು ಆಶಯಗಳನ್ನು ಅರ್ಥಮಾಡಿಕೊಳ್ಳದಿರುವುದು.

ಮಠ–ಮಾನ್ಯಗಳ ಉದ್ದೇಶವೇ ಜನಸೇವೆ. ಮಠ ಎನ್ನುವುದು ಸನ್ಯಾಸಿಗಳ ವಾಸಸ್ಥಾನ ಎಂದಿದ್ದರೂ ಅದು ಧರ್ಮ ಬೋಧನೆ ಮತ್ತು ಜ್ಞಾನ ಪ್ರಸಾರ ಮಾಡುವ ಆಧ್ಯಾತ್ಮಿಕ ಕೇಂದ್ರ. ಮಠ ಸಾಧು–ಸಂತರ ಆಶ್ರಯ ಸ್ಥಾನವಾಗಿರುವಂತೆ ಯಾತ್ರಾರ್ಥಿಗಳ ಅನ್ನಛತ್ರವೂ ಹೌದು; ವಿದ್ಯಾರ್ಥಿಗಳ ಪಾಠಶಾಲೆಯೂ ಹೌದು. ಮಾನ್ಯಗಳು (ಉಂಬಳಿ) ಹುಟ್ಟಿಕೊಂಡದ್ದು ಈ ಉದ್ದೇಶ ಸಾಧನೆಗೆ ಪೂರಕವಾಗಿಯೇ.

* **ದೇವರು–ಧರ್ಮ ಇಂತಹ ವಿಷಯಗಳಲ್ಲಿ ಇಂದಿನ ತಲೆ ಮಾರಿಗೆ ನಂಬಿಕೆ ಕಡಿಮೆಯಾಗಲು ಕಾರಣವೇನು ?**

**ಸ್ವಾಮೀಜಿ :** ಈ ಹೊತ್ತಿನ ಶಿಕ್ಷಣ ಪದ್ಧತಿ ಒಂದು ಕಾರಣ. ಮತ್ತೊಂದು ಆಧುನಿಕ ಸಂಪರ್ಕ ಸಂವಹನ ಮಾಧ್ಯಮಗಳು ಯುವ ಜನರಲ್ಲಿ ಅನಿಶ್ಚಿತತೆಯ ಭಾವನೆ ಉಂಟು ಮಾಡಿರುವುದು. ಅವರ ವಯೋಮಾನಕ್ಕೆ ತಕ್ಕಂತೆ ಉತ್ಸಾಹ, ಆಸೆ–ಆಕಾಂಕ್ಷೆಗಳು ಇರುವುದು ಸಹಜ. ಆ ಸಹಜ ಗುಣಸ್ವಭಾವಗಳನ್ನು ಸತ್ಕಾರ್ಯ–ಸತ್ಸಾಧನೆಗಳತ್ತ ಮುಖ ಮಾಡಿಸಿದರೆ ಯುವಜನ ರಾಷ್ಟ್ರಕ್ಕೆ ಬಹುಮೌಲಿಕ ಶಕ್ತಿಯಾಗುತ್ತದೆ. ದೇವರು–ಧರ್ಮಗಳ ಬಗೆಗೆ ಅವರಿಗೆ ಶ್ರದ್ಧಾಶಕ್ತಿಗಳು ಇಲ್ಲವೆಂದಲ್ಲ. ಆದರೆ, ಅವು ಲೌಕಿಕ ಬದುಕಿಗೆ ಭಿನ್ನವೆಂಬ ಭಾವನೆ ಅವರಲ್ಲಿ ಉಂಟಾಗಿದೆ. ಅವು ನಮ್ಮ ನಿತ್ಯ ಬದುಕಿನಲ್ಲೇ ಅಂತರ್ಗತವಾಗಿರುವ ಸತ್ಯಗಳು ಎಂಬುದನ್ನು ಮನವರಿಕೆ ಮಾಡಿಕೊಡಬೇಕಾಗಿದೆ.

ಯುವ ಜನರು ಆಕರ್ಷಿತರಾಗಿರುವ ಆಧುನಿಕ ಮಾಧ್ಯಮಗಳನ್ನೇ ಅವರ ಬಾಳಿನ ಮೂಲಭೂತ ರಹಸ್ಯವನ್ನು ಅರ್ಥ ಮಾಡಿಸಿಕೊಡಲು ಬಳಸಿಕೊಳ್ಳಬೇಕಾಗಿದೆ. ಇಂದಿನ ಒತ್ತಡದ ಸನ್ನಿವೇಶದಲ್ಲಿ ಯುವ ಜನ ಸಹಜವಾಗಿಯೇ ಕೇವಲ ಮನರಂಜನೆಗಾಗಿ ಅಸಹಜವಾದ ಹವ್ಯಾಸ–ಅಭ್ಯಾಸಗಳಿಗೆ ತುತ್ತಾಗಿ ಬಿಡುತ್ತಾರೆ. ಅಂತಹ ಒತ್ತಡಕ್ಕೆ ಅವಕಾಶವಾಗದಂತಹ ತಾತ್ವಿಕ ಬದುಕಿನ ಒಂದು ಮುಕ್ತ ವಾತಾವರಣವನ್ನು ನಾವು ಕಲ್ಪಿಸಬೇಕಾಗಿದೆ.

* **ಧಾರ್ಮಿಕ, ಸಾಮಾಜಿಕ, ರಾಜಕೀಯ–ಇಂತಹ ಯಾವುದೇ ವ್ಯವಸ್ಥೆಯು ಸ್ಥಗಿತಗೊಂಡಾಗ ಅಂತಹ ವ್ಯವಸ್ಥೆಯ ವಿರುದ್ಧ ಬಂಡಾಯ ದಂಥ ಪ್ರತಿಕ್ರಿಯೆಗಳು ಮೂಡಿಬರುವುದು ಸಹಜವಲ್ಲವೆ ?**

**ಸ್ವಾಮೀಜಿ :** ಯಾವುದೇ ಕ್ಷೇತ್ರದಲ್ಲಿ ಅನ್ಯಾಯ, ಅಸಂಗತ, ಅಸಂಬದ್ಧತೆಗಳು ಕಂಡಾಗ ಪ್ರಜ್ಞಾವಂತರು ಅಸಹನೆ ವ್ಯಕ್ತಪಡಿಸುವುದು ಸಹಜವಾದದ್ದೆ. ಇದಕ್ಕೆ ೧೨ನೆಯ ಶತಮಾನದಲ್ಲಿ ಬಸವಣ್ಣನವರ ನಾಯಕತ್ವದಲ್ಲಿ ನಡೆದ ಅಂದೋಲನ ಒಂದು ದಿವ್ಯ ಸಾಕ್ಷಿ.

ನೀವು ಹೇಳಿದಂತೆ, ಅಂದಿನ ಸ್ಥಗಿತ ವ್ಯವಸ್ಥೆಯ ವಿರುದ್ಧವೇ ಆ ಆಂದೋಲನ ನಡೆದದ್ದು. ಆದರೆ ಅದರ ವಿಶೇಷವೆಂದರೆ, ಅದರಲ್ಲಿ ಉಗ್ರತೆಯಿರಲಿಲ್ಲ; ಅದು ಹಿಂಸಾತ್ಮಕವಾಗಿರಲಿಲ್ಲ. ಅದನ್ನು ಪ್ರತಿಭಟನೆ ಎನ್ನುವುದಕ್ಕಿಂತ ಪರಿವರ್ತನೆಯ ಒಂದು ಚಳುವಳಿ ಎನ್ನಬಹುದು.

ಯಾವುದೇ ಬಂಡಾಯವಿರಲಿ, ಅದರ ಮೂಲ ಆಶಯವೇ ಸಮಾಜ ಸುಧಾರಣೆಯಾಗಿರಬೇಕು. ಅಂತಹ ಸದಾಶಯದ ಬಂಡಾಯವನ್ನು ಅಧಿಕಾರದಲ್ಲಿರುವವರು ಅಥವಾ ಪ್ರತಿಗಾಮಿ ಶಕ್ತಿಗಳು ಅದನ್ನು ಹತ್ತಿಕ್ಕಲು ತಮ್ಮ ಬಲವನ್ನು ಬಳಸಬಾರದು.

---

* ಮಾಜಿ ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು

ಅದಕ್ಕೆ ಬದಲಾಗಿ ಸಮನ್ವಯ ಮೂಲವನ್ನು ಗುರುತಿಸಿ, ಪರಿಹಾರ ಮಾರ್ಗ ಕಂಡು ಕೊಳ್ಳಲು ಪ್ರಯತ್ನಿಸಬೇಕು.

* **ಸಂನ್ಯಾಸದ ಬಗೆಗೆ ತಮ್ಮ ಪರಿಕಲ್ಪನೆ ಏನು ? ತಾವು ಸನ್ಯಾಸ ಸ್ವೀಕರಿಸಲು ಪ್ರೇರಣೆ ಏನು ?**

ಸ್ವಾಮೀಜಿ : ಸಂನ್ಯಾಸ ಎನ್ನುವುದು ಒಂದು ಭೌತಿಕ ರೂಪವಲ್ಲ; ತಾತ್ವಿಕ ಭಾವ. ಅದು ಆಂತರಿಕ ಬೆಳವಣಿಗೆಯ ಒಂದು ಪರಿಪಕ್ವ ಸ್ಥಿತಿ. ಸಂನ್ಯಾಸ ಏಕಾಂತದ ಒಂದು ಬದುಕೆನಿಸಿದರೂ ಲೋಕವನ್ನು ಮರೆಯಬಾರದು. ಸಂನ್ಯಾಸ ಸುಮ್ಮನೆ ಬರುವುದಿಲ್ಲ. ಅದು ಪಠ್ಯಪುಸ್ತಕದ ಅಧ್ಯಯನವಲ್ಲ, ಆತ್ಮ ಸಾಧನೆಯ ಫಲ. ಮನೋ ನಿಯಂತ್ರಣದಿಂದ ಸಹನೆ-ಸಂಯಮಗಳನ್ನು ಸಾಧಿಸಬೇಕು. ನಿಜವಾದ ಸಂನ್ಯಾಸಿ ಅಂತರಂಗದೊಡನೆ ಸಂವಾದಿಸುತ್ತಾನೆ. ಆ ಮೂಲಕ ಆತ್ಮಶಕ್ತಿ ಪಡೆಯುತ್ತಾನೆ. ತಾನು ಸಾಧಿಸಿದ ಆತ್ಮಶಕ್ತಿಯನ್ನು ಸಮಾಜ ಒಳಿತಿಗಾಗಿ ಬಳಸುತ್ತಾನೆ.

ಸಂನ್ಯಾಸ ವೇಷಭೂಷಣದ ರೂಪವಾಗಬಾರದು. ಸೇವೆಯ ಸ್ವರೂಪ ವಾಗಬೇಕು. ಸಂನ್ಯಾಸ ಸ್ವೀಕಾರಕ್ಕೆ ದೃಢ ಸಂಕಲ್ಪವಿರಬೇಕು. ಸಂನ್ಯಾಸ ಸ್ವೀಕರಿಸುವುದೆಂದರೆ, ಸೇವಾ ದೀಕ್ಷೆ ಸ್ವೀಕರಿಸಿದಂತೆ. ಸಂನ್ಯಾಸ ಧರ್ಮಕ್ಕೆ ಸ್ವಾಮಿ ವಿವೇಕಾನಂದರಂಥವರು ಮೇಲ್ಪಂಕ್ತಿಯಾಗಬೇಕು. ಸಂನ್ಯಾಸಿಯದು ಏಕಾಂತದ ಸಾಧನೆ, ಲೋಕ ಹಿತದ ಸೇವೆ.

* **ಇಂದಿನ ಸ್ಥಿತಿಯಲ್ಲಿ ಧರ್ಮಗುರುಗಳು ವಹಿಸಬೇಕಾದ ಪಾತ್ರವೇನು ?**

*ಸ್ವಾಮೀಜಿ :* ಧಾರ್ಮಿಕ ಆಚರಣೆಗಳು ಕೇವಲ ಜನರ ಭಾವ, ಭಕ್ತಿ ಶ್ರದ್ಧೆಗಳಿಗಾಗಿ ನಡೆಯುವ ವಿಧಿಗಳು. ಆದರೆ ಧರ್ಮಗುರು ಅವನ್ನು ಮೀರಿದ ಆಧ್ಯಾತ್ಮ ಸಾಧನೆ ಮಾಡಬೇಕು. ನಿರಂತರ ಅಧ್ಯಯನ ಶೀಲನಾಗಿರಬೇಕು. ಧರ್ಮಗುರು ಸಂನ್ಯಾಸಿಯೂ ಹೌದು. ಮೊದಲೇ ಹೇಳಿದಂತೆ ಸಂನ್ಯಾಸಿಯಂತೆ ಧರ್ಮಗುರು ತನ್ನ ಆಧ್ಯಾತ್ಮಿಕ ಶಕ್ತಿ ಸಂಪತ್ತಿನಿಂದ ಭಕ್ತ ಸಮುದಾಯದ ಕ್ಷೇಮ ನೋಡಿಕೊಳ್ಳಬೇಕು.

ಧರ್ಮಗುರು ಸ್ಥಾವರವಾಗದೆ ಜಂಗಮವಾಗಿ ಲೋಕ ಸೇವೆಯಲ್ಲಿ ಸವೆಯಬೇಕು. ಸಾಮಾಜಿಕ ಸಂಪರ್ಕವಿಲ್ಲದೆ ಧರ್ಮಗುರು ಏನನ್ನೂ ಸಾಧಿಸಲಾಗದು.

* **ತಾವು ೧೨ನೆಯ ಶತಮಾನದ ಶಿವಶರಣರು ನುಡಿದು-ನಡೆದು ತೋರಿದ ಕಾಯಕ-ದಾಸೋಹಗಳಿಗೆ ಅರ್ಪಿಸಿಕೊಂಡಿದ್ದೀರಿ. ಸಮಾಜ ಸ್ವಾಸ್ಥ್ಯಕ್ಕೆ ಈ ಎರಡು ಸೂತ್ರಗಳು ಹೇಗೆ ನೆರವಾಗುತ್ತವೆ ಎಂಬುದನ್ನು ತಮ್ಮ ಅನುಭವದ ಹಿನ್ನೆಲೆಯಲ್ಲಿ ಹೇಳಬಹುದೆ ?**

*ಸ್ವಾಮೀಜಿ :* ಶಿವಶರಣರ ಕಾಯಕ-ದಾಸೋಹ ಸೂತ್ರಗಳು ಅದ್ಭುತವಾದ, ಅನನ್ಯವಾದ ಜೀವನ ಸೂತ್ರಗಳು. ಸ್ವತಂತ್ರ ಭಾರತವನ್ನು ಆರ್ಥಿಕವಾಗಿ ಸಮೃದ್ಧಗೊಳಿಸಲು ಸಾಕಷ್ಟು ಪ್ರಯತ್ನ ನಡೆದಿದೆ. ಆದರೆ ಈ ಆರ್ಥಿಕ ಪ್ರಗತಿಯು ಸಮಗ್ರತೆಯ ಕೊರತೆಯಿಂದ ಸೊರಗಿ ಬಿಡುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಶ್ರಮದ ದುಡಿಮೆಯಿಂದಲೇ ಗಳಿಸುವಂತಹ ವ್ಯವಸ್ಥೆಯಿರಬೇಕು. ಹಾಗೆ ಪ್ರತಿಯೊಬ್ಬರೂ ದುಡಿಮೆಯಲ್ಲಿ ತೊಡಗಿದರೆ ಸೋಮಾರಿತನಕ್ಕಾಗಲೀ, ಮತ್ತ್ಯಾವುದೇ ದುಷ್ಟ ಚಟುವಟಿಕೆಗಳಿಗಾಗಲೀ ಅವಕಾಶವಿರುವುದಿಲ್ಲ. ಶರಣರ ಕಾಯಕ ಸೂತ್ರ ವ್ಯಕ್ತಿಯನ್ನು ಸದಾ ಕ್ರಿಯಾಶೀಲನನ್ನಾಗಿಡುತ್ತದೆ.

ದೈಹಿಕ ದುಡಿಮೆಯ ಕಾಯಕ ಯಾವುದೇ ಇದ್ದರೂ ಎಲ್ಲ ಕಾಯಕಗಳೂ ಸಮಾನ; ಕಾಯಕ ಮಾಡುವವರೂ ಸಮಾನ. ಕಾಯಕದ ಮಹತ್ವವಿರುವುದೇ ಈ 'Dignity of labour'ನಲ್ಲಿ.

ಇನ್ನು ದಾಸೋಹ. ವಾಸ್ತವವಾಗಿ, ದಾಸೋಹವು ಶ್ರಮದ ದುಡಿಮೆಯಿಂದ ಬಂದ ಫಲದ ಹಂಚಿಕೆಯ ಸೂತ್ರ, ಸಾಮಾನ್ಯವಾಗಿ ದಾಸೋಹವೆಂದರೆ ಉಚಿತ ಊಟದ ಪೂರೈಕೆ, ಇದರಿಂದ ಸೋಮಾರಿಗಳಿಗೆ ಉತ್ತೇಜನ ನೀಡಿದಂತಾಗುತ್ತದೆ ಎಂದು ಕೆಲವರು ಭಾವಿಸಿದಂತಿದೆ. ಆದರೆ ದಾಸೋಹ ವ್ಯವಸ್ಥೆಯಲ್ಲಿ ಅಗತ್ಯ ಮತ್ತು ಅರ್ಹತೆ ಇರುವವರಿಗೇ ಪ್ರಸಾದದ ಅವಕಾಶ. ನಮ್ಮ ಮಠದಲ್ಲಿ ಪ್ರತಿದಿನ ಒಂಬತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗಾಗಲೀ, ಸಾವಿರಾರು ಸಂಖ್ಯೆಯ ಯಾತ್ರಾರ್ಥಿಗಳಿಗಾಗಲೀ ನಿತ್ಯ ದಾಸೋಹ ವ್ಯವಸ್ಥೆ ಇದೆ ಎಂದರೆ, ಅದು ಶ್ರಮಜೀವಿಗಳು ಕೊಟ್ಟ ಫಲದ ಸಾರ್ಥಕ ವಿನಿಯೋಗ. ಇಲ್ಲಿ ದಾಸೋಹದ ಫಲಾನುಭವಿಗಳೆಲ್ಲ ಅಗತ್ಯವಿರುವವರೇ, ಅರ್ಹರೇ.

* **ನಮ್ಮದು ಜಾತ್ಯಾತೀತ ರಾಷ್ಟ್ರವೆಂದು ನಮ್ಮ ಸಂವಿಧಾನದಲ್ಲಿ ನಿರೂಪವಾಗಿದೆ. ಆದರೂ ದಿನ ದಿನಕ್ಕೆ ಜಾತಿ-ಮತ-ಪಂಥಗಳ ಪರಸ್ಪರ ಮೇಲಾಟವೇ ನಡೆಯುತ್ತಿದೆ. ಈ ಬೆಳವಣಿಗೆಯನ್ನು ತಡೆಗಟ್ಟುವುದು ಹೇಗೆ ?**

*ಸ್ವಾಮೀಜಿ :* ಜಾತಿ-ಮತ-ಪಂಥಗಳ ನಿವಾರಣೆ ತಕ್ಷಣಕ್ಕೆ ಆಗುವಂತ್ತಿಲ್ಲ ವಾದ ಕಾರಣ ಪರಸ್ಪರ ಸೌಹಾರ್ದವಾದರೂ ಇರಬೇಕಲ್ಲವೆ ? ವಾಸ್ತವವಾಗಿ





ಯಾವ ಧರ್ಮವೂ ಜಾತಿ ಭೇದವನ್ನು ಬೋಧಿಸುವುದಿಲ್ಲ. ಹಾಗೆ ಬೋಧಿಸಿದ್ದರೆ ಅದು ಧರ್ಮ ಎನಿಸಿಕೊಳ್ಳುವುದಿಲ್ಲ.

ನಮ್ಮ ಜಾತ್ಯಾತೀತ ನೀತಿಗೆ ಒಂದು ಕಡೆ ಮತಾಂಧರು ಘಾತವುಂಟು ಮಾಡಿದರೆ, ಮತ್ತೊಂದು ಕಡೆ ರಾಜಕೀಯ ಉದ್ದೇಶಕ್ಕಾಗಿ ರಾಜಕಾರಣಿಗಳೂ ಭಂಗವುಂಟುಮಾಡಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಎಲ್ಲ ಜಾತಿ-ಮತಗಳ ಎಲ್ಲೆಗಳನ್ನು ದಾಟಿ, ಕೇವಲ 'ಕಾಯಕ-ದಾಸೋಹ' ಸೂತ್ರದ ಆಧಾರದ ಮೇಲೆ ಸಮಾಜ ನಿರ್ಮಾಣ ಮಾಡುವುದರಿಂದ ಮಾತ್ರ ಈ ಪಿಡುಗನ್ನು ಅಡಗಿಸಲು ಸಾಧ್ಯ.

* **ನಮ್ಮ ಇಂದಿನ ಶಿಕ್ಷಣ ಪದ್ಧತಿ ಹೊಸ ಸವಾಲುಗಳನ್ನು ಎದುರಿಸುವ ಸಾಮರ್ಥ್ಯ ಪಡೆದಿದೆಯೆ ? ಶಿಕ್ಷಣ ವ್ಯವಸ್ಥೆಯ ಮೂಲಭೂತ ಆಶಯುವಾದ ವ್ಯಕ್ತಿ ನಿರ್ಮಾಣದ ಕೆಲಸ ನಡೆದಿದೆಯೆ ?**

*ಸ್ವಾಮೀಜಿ :* ನಮಗೆ ಸ್ವಾತಂತ್ರ್ಯ ಬಂದ ಮೇಲೆ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಯೋಗಗಳು ನಡೆದಿದ್ದರೂ, ಶಿಕ್ಷಣದ ಮೂಲಭೂತ ಆಶಯ ಇನ್ನೂ ಈಡೇರಿಲ್ಲ. ನಮ್ಮ ಪಠ್ಯ ಪದ್ಧತಿ, ಶಿಕ್ಷಣ ಕ್ರಮ, ಪರೀಕ್ಷಾ ವಿಧಾನ – ಇವುಗಳನ್ನು ಇದುವರೆಗಿನ ಅನುಭವದ ಆಧಾರದ ಮೇಲೆ ಸಂಶೋಧನೆ ನಡೆಸಿ, ಸಮಕಾಲೀನ ಮತ್ತು ಭವಿಷ್ಯದ ಅಗತ್ಯಗಳನ್ನು ಗಮನದಲ್ಲಿಟ್ಟುಕೊಂಡು ಸುಧಾರಣೆ ಮಾಡುವ ಅಗತ್ಯವಿದೆ.

ಈಗ ಜನಸಂಖ್ಯೆ ಹೆಚ್ಚಾಗಿದೆ. ಜನರ ಜೀವನ ವಿಧಾನಗಳಲ್ಲೂ ಭಾರಿ ಬದಲಾವಣೆಗಳಾಗುತ್ತಿವೆ. ಆದರೆ ಸಮುದಾಯದಲ್ಲಿ ಇರಬೇಕಾದ ಸಾರ್ವಜನಿಕ ಸಭ್ಯತೆ ಕಾಣುತ್ತಿಲ್ಲ. ಹಿಂದೆಲ್ಲ ಶಿಕ್ಷಕನಿಗೆ ಒಂದು ಗೌರವದ ಸ್ಥಾನವಿತ್ತು. ಈಗ ಅದನ್ನು ಕಾಣಲಾಗುತ್ತಿಲ್ಲ. ಇದಕ್ಕೆ ಸ್ವಯಂ ಶಿಕ್ಷಕರೂ ಕಾರಣವಿರಬಹುದು.

ವ್ಯಕ್ತಿ ನಿರ್ಮಾಣದ ಶಿಕ್ಷಣ ವ್ಯವಸ್ಥೆಗೆ ನಮ್ಮ ಶಿಕ್ಷಣ ತಜ್ಞರು ಕ್ರಮ ಕೈಗೊಳ್ಳಲು ನಮ್ಮ ರಾಜಕೀಯ ವ್ಯವಸ್ಥೆ ಅವಕಾಶ ನೀಡುತ್ತಿಲ್ಲ. ಶಿಕ್ಷಣ ಕ್ಷೇತ್ರಕ್ಕೆ ರಾಜಕೀಯ ಪ್ರವೇಶವಿರಬಾರದು. ಒಂದೊಂದು ಪಕ್ಷ ಅಧಿಕಾರಕ್ಕೆ ಬಂದಾಗಲೂ ತಮ್ಮದೇ ಆದ ಒಂದೊಂದು ನೀತಿ-ಧೋರಣೆಯನ್ನು ಶಿಕ್ಷಣ ಕ್ರಮದಲ್ಲಿ ಜಾರಿಗೊಳಿಸುವ ಪ್ರಯತ್ನ ನಡೆಯಬಾರದು. ನಮ್ಮ ಶಿಕ್ಷಣ ಪದ್ಧತಿ ನಮ್ಮ ದೇಶದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳನ್ನು ನಮ್ಮ ಸಂವಿಧಾನ ಹೇಳುವ 'ಸಭ್ಯ ನಾಗರಿಕ'ನನ್ನಾಗಿ ರೂಪಿಸುವಂತಿರಬೇಕು. ಇದಕ್ಕಾಗಿ ಶಿಕ್ಷಕರಿಗೆ ಸಮರ್ಥವಾದ ತರಬೇತಿ ವ್ಯವಸ್ಥೆಯಿರಬೇಕು.

* **ಧರ್ಮ-ರಾಜಕೀಯ ಇವು ಪರಸ್ಪರ ಭಿನ್ನವೆ ? ಪೂರಕವೆ ? ಪೂರಕ ಎನ್ನುವುದಾದರೆ ಅವುಗಳ ಸಂಬಂಧ ಸ್ವರೂಪವೇನು ?**

*ಸ್ವಾಮೀಜಿ :* ಧರ್ಮ ಎನ್ನುವುದು ಜೀವನದ ಒಂದು ವಿಧಾನ. ರಾಜಕೀಯ ಎನ್ನುವುದು ಒಂದು ವ್ಯಾವಹಾರಿಕ ಘಟಕ ವ್ಯವಸ್ಥೆ. ಧರ್ಮ ಶಾಶ್ವತವಾದುದು; ರಾಜಕೀಯ ವ್ಯವಸ್ಥೆ ತಾತ್ಕಾಲಿಕವಾದುದು ಮತ್ತು ವ್ಯತ್ಯಾಸಗೊಳ್ಳುವಂತಹದು.

ವ್ಯಕ್ತಿಯ ಜೀವನಕ್ಕೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಉದ್ದೇಶಗಳಿವೆ. ಈ ಉದ್ದೇಶ ಸಾಧನೆ ವೈಯಕ್ತಿಕವಾದುದು. ಆದರೆ ಸಾಮೂಹಿಕ ಬದುಕಿನ ಕ್ಷೇಮ ನೋಡಿಕೊಳ್ಳಲು ರಾಜಕೀಯ ವ್ಯವಸ್ಥೆಯೂ ಇರಬೇಕಾಗುತ್ತದೆ. ಆದರೆ ಈ ರಾಜಕೀಯದಲ್ಲಿ ಧರ್ಮವಿರಬೆಕು. ಧರ್ಮದಲ್ಲಿ ರಾಜಕೀಯವಿರಬಾರದು. ಧರ್ಮಬದ್ಧವಾದ ಎಂದರೆ ನೀತಿಬದ್ಧವಾದ ರಾಜಕೀಯವಿದ್ದರೆ ಆಗ ಧರ್ಮ-ರಾಜಕೀಯಗಳೆರಡೂ ಪರಸ್ಪರ ಪೂರಕವೇ ಆಗುತ್ತದೆ. ಈ ಎರಡರ ಮೂಲ ಸ್ವರೂಪ ಮತ್ತು ಕಾರ್ಯವಿಧಾನಗಳು ಬೇರೆಯಾದರೂ ಸಮಷ್ಟಿ ಹಿತವೊಂದೇ ಅವುಗಳ ಆಶಯುವಾಗಿರಬೇಕು; ಅದಕ್ಕಾಗಿಯೇ ಅವು ಬಳಕೆಯಾಗಬೇಕು.

* **ಇಂದು ವಿಶ್ವದ ಎಲ್ಲ ಕಡೆ ಭ್ರಷ್ಟಾಚಾರ ಭಯೋತ್ಪಾದನೆ, ಜನಾಂಗೀಯ ಘರ್ಷಣೆ ಮತ್ತು ವಿಧ್ವಂಸಕ ಕೃತ್ಯಗಳು ಅವ್ಯಾಹತವಾಗಿ ನಡೆಯುತ್ತಿವೆ. 'ಶಿಕ್ಷಿತ'ರೆನ್ನುವವರಿಂದ ಆಗುಷ್ಟು ಅನಾಹುತ 'ಅಶಿಕ್ಷಿತ'ರಿಂದ ಆದಂತೆ ಕಾಣುವುದಿಲ್ಲ.... ?**

*ಸ್ವಾಮೀಜಿ :* ಘಾತುಕ ಕೃತ್ಯಗಳಿಗೆ ಕಾರಣರಾದವರನ್ನು ಶಿಕ್ಷಿತರು ಎಂದು ಹೇಳಲಾಗುವುದಿಲ್ಲ. 'ಅಕ್ಷರಸ್ಥರು' ಎಂದಷ್ಟೇ ಹೇಳಬಹುದು. ಅಕ್ಷರಸ್ಥ ನಾದರೂ ಅಜ್ಞಾನ ಮತ್ತು ಸಂಶಯದಿಂದ ದೂರವಾಗಿರುವುದಿಲ್ಲ. ನಿಜವಾದ ಧರ್ಮದಲ್ಲಿ ನಿಷ್ಠೆಯಿಲ್ಲದವರೇ ಮತಾಂಧರಾಗುವುದು. 'We should have to teach the learned than the illiterate' ಎಂಬ ಮಾತೊಂದಿದೆ. ಅನಕ್ಷರಸ್ಥನಿಗೆ ಸಾಮಾನ್ಯ ಪ್ರಜ್ಞೆಯಾದರೂ ಇರುತ್ತದೆ. ಆದರೆ ಕಲಿತವರೆಂದು

ಹೇಳಿಕೊಳ್ಳುವವರೇ ಅನೇಕ ಸಲ ವಿವೇಕಹೀನರಾಗಿ ನಡೆದುಕೊಳ್ಳುವುದುಂಟು.

ದುಷ್ಕೃತ್ಯ ಒಂದು ಅಂತಾರಾಷ್ಟ್ರೀಯ ಪಿಡುಗು. ಈ ಬಗೆಗೆ ನಮ್ಮ ಯುವ ಜನಾಂಗಕ್ಕೆ ಮಾನವ ಸಂಬಂಧದ ಸಮಗ್ರ ಶಿಕ್ಷಣ ನೀಡಬೇಕು. ಏಕೆಂದರೆ ಇಂತಹ ಮಾರಕ ಘಟನೆಗಳಲ್ಲಿ ಯುವಜನರ ಪಾತ್ರವೇ ಹೆಚ್ಚಾಗಿರುವುದನ್ನು ನಾವು ಕಾಣುತ್ತೇವೆ.

* **ಪ್ರಜಾಪ್ರಭುತ್ವದಲ್ಲಿ ಜನ ಪ್ರಾತಿನಿಧ್ಯದ ರಾಜಕೀಯ ವ್ಯವಸ್ಥೆ ಅನಿವಾರ್ಯವೆನಿಸಿದೆ. ಆದರೆ ಈಗ ಎಲ್ಲ ಕ್ಷೇತ್ರಗಳಲ್ಲೂ ಪ್ರವೇಶಿಸಿರುವ ರಾಜಕೀಯ ಕ್ಷೇತ್ರ ಕಳಂಕಗೊಂಡಿದೆ. ಇದರ ಶುದ್ಧೀಕರಣ ಸಾಧ್ಯವೆ ?**

*ಸ್ವಾಮೀಜಿ :* ರಾಜಕೀಯ ಪಕ್ಷಗಳು ಪ್ರಜಾಪ್ರಭುತ್ವದ ಬಗೆಗೆ ಪೂರ್ಣ ನಿಷ್ಠೆ ಹೊಂದಿರಬೇಕು ಮತ್ತು ರಾಷ್ಟ್ರದ ಸಂವಿಧಾನಕ್ಕೆ ಬದ್ಧವಾಗಿರಬೇಕು ಎಂಬುದು ಅಂದಿನ ರಾಷ್ಟ್ರನಾಯಕರ ಉದ್ದೇಶವಾಗಿತ್ತು.

ಆದರೆ ಇಂದಿನ ವ್ಯವಸ್ಥೆಯಲ್ಲಿ ಆ ಲಕ್ಷಣಗಳು ಕಂಡು ಬರುತ್ತಿಲ್ಲ. ನಮ್ಮ ರಾಜಕೀಯ ವ್ಯವಸ್ಥೆಯನ್ನು ಕಲುಷಿತಗೊಳಿಸುವಲ್ಲಿ ನಮ್ಮ ಚುನಾವಣಾ ಪದ್ಧತಿಯೂ ತನ್ನ ಪಾತ್ರ ವಹಿಸಿದೆ. ಚುನಾವಣೆಯಲ್ಲಿ ಮತದಾರನಿಗೆ ಹಣ ಕೊಡುವುದು, ಮದ್ಯಪಾನ ಮಾಡಿಸುವುದು ಮೊದಲಾದ ಅನೈತಿಕ ಮಾರ್ಗಗಳಿಂದ ಅವನನ್ನು ಭ್ರಷ್ಟಗೊಳಿಸಲಾಗುತ್ತಿದೆ. ಜನ ಇಂತಹ ದೌರ್ಬಲ್ಯಗಳಿಂದ ಹೊರಬರಬೇಕು.

ಈ ಹಿನ್ನೆಲೆಯಲ್ಲಿ ನಮ್ಮ ಚುನಾವಣಾ ಪದ್ಧತಿಯಲ್ಲೇ ಕ್ರಾಂತಿಕಾರಿ ಬದಲಾವಣೆಯ ಅಗತ್ಯವಿದೆ. ಆದರೆ ಈ ಬದಲಾವಣೆಗೆ, ತಮ್ಮ ಅಸ್ತಿತ್ವವನ್ನೇ ಗುರಿಯಾಗಿಟ್ಟುಕೊಂಡಿರುವ ರಾಜಕೀಯ ಪಕ್ಷಗಳು ಅವಕಾಶ ಕೊಡುತ್ತಿಲ್ಲ. ಇದಕ್ಕೆ, ತಮ್ಮ ಪ್ರತಿನಿಧಿಗಳನ್ನು ಆರಿಸುವ ಮತದಾರರ ಜಾಗೃತಿಯೊಂದೇ ಉಳಿದಿರುವ ದಾರಿ.

* **ಜಾಗತೀಕರಣದ ಅಬ್ಬರದಲ್ಲಿ ಭಾರತದ ಅದರಲ್ಲೂ ಗ್ರಾಮಾಂತರ ಜನರ ಬದುಕಿನ ಮೇಲೆ ಉಂಟಾಗಿರುವ ಪರಿಣಾಮವೇನು ?**

*ಸ್ವಾಮೀಜಿ :* ನಾನು ತಿಳಿದ ಮಟ್ಟಿಗೆ ಗ್ರಾಮಾಂತರದ ಜನ ಜೀವನದಲ್ಲಿ ಹೆಚ್ಚಿನ ಸುಧಾರಣೆ ಆಗಿಲ್ಲ. ಅದೇ ದಾರಿದ್ರ್ಯ, ಅದೇ ಬಡತನ, ಅದೇ ಸಾವು ನೋವು. ತಿಂಗಳಿಗೆ ನಮ್ಮ ಮಠಕ್ಕೆ ಒಬ್ಬಿಬ್ಬರಾದರೂ ಬಂದು ಸಾಲ-ಸೋಲ ಮತ್ತಿತರ ದುಸ್ಥಿತಿಗಳನ್ನು ಹೇಳಿಕೊಂಡು ಕಣ್ಣೀರು ಕರೆಯುತ್ತಾರೆ. ಇದು ಒಟ್ಟು ಗ್ರಾಮೀಣ ಬದುಕಿನ ಅವಸ್ಥೆಯಾಗಿದೆ.

ನಮ್ಮ ರೈತರು ಮತ್ತು ಗ್ರಾಮೀಣ ನಿರುದ್ಯೋಗಿಗಳ ರಕ್ಷಣೆಗೆ ಸರ್ಕಾರ ನಿರ್ದಿಷ್ಟವಾದ ನೀತಿ ನಿರೂಪಿಸಿ, ಸೂಕ್ತ ಪರಿಹಾರ ಕ್ರಮ ಕೈಕೊಳ್ಳಬೇಕು. ಇಲ್ಲವಾದರೆ ಎಲ್ಲರನ್ನೂ ಅನ್ನ ಬೆಳೆದು ಸಾಕುವ ಹಳ್ಳಿಗರನ್ನು ಬೆಂಕಿಗೆ ತಳ್ಳಿದಂತಾಗುತ್ತದೆ.

* **ತಾವು ಸಿದ್ಧಗಂಗಾ ಕ್ಷೇತ್ರದ ಪಟ್ಟಾಧಿಕಾರ ವಹಿಸಿಕೊಂಡು ೮೭ ವರ್ಷಗಳೇ ಆಗಿದೆ. ಈ ಅವಧಿಯಲ್ಲಿ, ತಾವು ಅನುಭವಿಸಿದ ಕಷ್ಟ ನಷ್ಟಗಳ ಮಧ್ಯೆಯೂ ತಮಗೆ ತೃಪ್ತಿತಂದ ಸಾಧನೆಗಳಾವು ?**

*ಸ್ವಾಮೀಜಿ :* ಎಲ್ಲಾ ವರ್ಗದ ಎಲ್ಲಾ ಸಮುದಾಯದ ಜನರೇ ಮಠದ ಆಸ್ತಿ. ಅವರ ಸಹಾಯ, ಸಹಕಾರಗಳಿಂದ ಇಷ್ಟನ್ನು ಬೆಳೆಸಲು ಸಾಧ್ಯವಾಗಿದೆ. ಅದೇ ತೃಪ್ತಿಯ ಕೆಲಸ. ಆದರೆ ಬಸವಣ್ಣನವರ ಆದರ್ಶವಿಟ್ಟುಕೊಂಡಿರುವ ನಮಗೆ ಅಂತಹ ಆದರ್ಶ ಸಮಾಜ ಕಟ್ಟಲು ಸಾಧ್ಯವಾಗಿಲ್ಲವೆಂಬ ವ್ಯಥೆ ಇದೆ. ಏನಿದ್ದರೂ ಗ್ರಾಮಾಂತರ ಪ್ರದೇಶದಿಂದ ಬರುವ ಅನಾಥ, ಅಸಹಾಯಕ ಮಕ್ಕಳಿಗೆ ಮಠದಲ್ಲಿ ಸಹಜವಾದ ಸಂತೃಪ್ತಿಯ ಸಂಗತಿ.

* **'ಪದ್ಮಭೂಷಣ' ಪ್ರಶಸ್ತಿ ಸಂದರ್ಭದಲ್ಲಿ ನಾಡಿಗೆ ತಮ್ಮ ಆಶೀರ್ವಚನ.....**

*ಸ್ವಾಮೀಜಿ :* ಈ ಪ್ರಶಸ್ತಿ ಅಷ್ಟು ಮುಖ್ಯವಲ್ಲ. ಆದರೂ ಇದು ಮಠದ ಭಕ್ತರಿಗೆ ಸಂದ ಪ್ರಶಸ್ತಿ ಎಂದೇ ಭಾವಿಸಿ ಒಪ್ಪಿಕೊಳ್ಳಬೇಕಾಯಿತು. ಈ ಸಂದರ್ಭದಲ್ಲಿ ನಾಡಿನ ಜನತೆಯು ಮುಂದೆ ನಾವು ಇಡಬಯಸುವ ಆಶಯವೆಂದರೆ – ಯಾವುದೇ ವೃತ್ತಿ, ಧರ್ಮ, ಭಾಷೆಯ ಜನರಿರಲಿ, ಅವರೆಲ್ಲ ರಾಷ್ಟ್ರದ ಸಮಗ್ರತೆಯ ಬಗೆಗೆ, ಸಾತ್ವಿಕ ಜೀವನದ ಬಗೆಗೆ ಗಂಭೀರವಾಗಿ ಆಲೋಚಿಸುವಂತಾಗಬೇಕು. ಇಂದು ಎಲ್ಲ ಕಡೆ ಕಾಣುವ ಹಣ ಮತ್ತು ಅಧಿಕಾರಗಳ ದಾಹ ಬಿಟ್ಟು ಸರಳವಾದ ಮತ್ತು ಸಭ್ಯವಾದ ಜೀವನ ನಡೆಸಬೇಕು. ಎಲ್ಲ ಜಾತಿ-ಮತ-ಪಂಥಗಳ ಬೇಧ-ಭಾವನೆಗಳನ್ನು ತೊರೆದು ವೈಚಾರಿಕ ಚಿಂತನೆಯ ಹೊಸ ಭಾವ ತಾಳಿ ಪರಸ್ಪರ ಸೌಹಾರ್ದಯುತವಾಗಿ ಬಾಳಬೇಕು. ಒಟ್ಟಾರೆ, ಕರ್ನಾಟಕ ಮತ್ತು ಭಾರತದ ಸಮಗ್ರ ಪ್ರಗತಿಯಾಗಬೇಕು. ವಿಶ್ವ ಸಮಾಜ ನೆಮ್ಮದಿಯಿಂದ ಬದುಕುವಂತಾಗಬೇಕು. ❑







# ಧರ್ಮ ದರ್ಶನ

– ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

ಧರ್ಮದರ್ಶನ ಕುರಿತು ಬರಯುತ್ತಿದ್ದಂತೆ ಇದು ತಿರುಪತಿಯ ದೇವರ ವಿಷಯದಲ್ಲಿ ಬರುವ ಧರ್ಮದರ್ಶನ ವಿಚಾರ ಎಂದು ಗೊಂದಲಕ್ಕೆ ಬೀಳಬೇಕಾಗಿಲ್ಲ. ಏಕೆಂದರೆ ಅಲ್ಲಿ ತಿರುಪತಿ ದೇವರ ದರ್ಶನ ಮಾಡುವುದಕ್ಕೆ ಸಾಲುಸಾಲಾಗಿ ನಿಂತು ಕಾಯಬೇಕು. ಜೊತೆಗೆ ದರ್ಶನ ಆಗುತ್ತಿದ್ದಂತೆ ಅಲ್ಲಿನ ದೇವಾಲಯದ ಕೆಲಸದವರು ಮುಂದೆ ಸಾಗಿ ಮುಂದೆ ಸಾಗಿ ಎಂದು ಒತ್ತಾಯಿಸುತ್ತಲೇ ಇರುತ್ತಾರೆ. ಇದು ಸಾಮಾನ್ಯರ ಧರ್ಮದರ್ಶನದ ರೀತಿ. ಇನ್ನು ಅಸಾಮಾನ್ಯರ-ಮಂತ್ರಿ ಮಹೋದಯರು ಮತ್ತಿತರರು ಬಂದರೆ ಅವರಿಗೆ ಸಾಲಲ್ಲಿ ಕಾದು ನಿಲ್ಲುವ ಒತ್ತಾಯವಿಲ್ಲ. ಪ್ರತ್ಯೇಕ ದ್ವಾರದಿಂದ ಅವರನ್ನು ನೇರವಾಗಿ ದೇವರ ಬಳಿಗೇ ಕರೆದೊಯ್ದು ದೇವರ ದರ್ಶನ ಮಾಡಿಸಿ ವಿಶೇಷ ಪ್ರಸಾದ ಹಾಗೂ ಗೌರವಗಳನ್ನು ಸಲ್ಲಿಸುವ ಏರ್ಪಾಡು ಇರುತ್ತದೆ.

ಇರಲಿ ಅದು ತಿರುಪತಿಯ ದೇವರ ದರ್ಶನದ ವಿಷಯವಾಯಿತು. ನಾನಿಲ್ಲಿ ಹೇಳುತ್ತಿರುವುದು ಸಿದ್ಧಗಂಗೆಯ ಇಂದಿನ ಗುರುಗಳಾದ ಶತಾಯುಷಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಬಗೆಗೆ, ಈಗಂತೂ ಅವರು ಅನೇಕರ ಪಾಲಿಗೆ ನಡೆದಾಡುವ ದೇವರು, ತ್ರಿವಿಧ ದಾಸೋಹಮೂರ್ತಿಗಳು, ಮಹಾತಪಸ್ವಿಗಳು, ಜ್ಞಾನಿಗಳು. ಅಲ್ಲಿ ನಡೆಯುವ ದಾಸೋಹ ಕಾರ್ಯವನ್ನು ಗಮನಿಸಿದರೆ, ಸಂಜೆ ನಡೆಯುವ ವಿದ್ಯಾರ್ಥಿಗಳ ಪ್ರಾರ್ಥನಾ ಸಭೆಗಳನ್ನು ಗಮನಿಸಿದರೆ, ಅವರು ಒಂದು ದಂತಕತೆಯಾಗಿ ಬಿಟ್ಟಿದ್ದಾರೆ.

ನಾನು ಓದಿದ್ದು ತುಮಕೂರಿನಲ್ಲಿ. ಪ್ರೌಢಶಾಲಾ ಶಿಕ್ಷಣವಂತು ಸಿದ್ಧಗಂಗೆಯ ಪ್ರೌಢಶಾಲೆಯಲ್ಲಿ. ಆಗ ಶಾಲೆಯ ಕಾರ್ಯಕ್ರಮಕ್ಕೆ ಅವರು ಬರುತ್ತಿದ್ದುದು ಟಾಂಗಾದಲ್ಲಿ. ಅದಕ್ಕೆ ಮೊದಲು ಅವರು ಪಂಚ ಕಲ್ಯಾಣ ಕುದುರೆ ಸವಾರಿ ಮಾಡುತ್ತಿದ್ದರಂತೆ, ಅದನ್ನು ನೆನಪಿಸಿದವರು ಚಿತ್ರದುರ್ಗದ ಮುರುಘಾಮಠದ ಲಿಂಗೈಕ್ಯ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು. ಆಮೇಲೆ ಭಕ್ತರು ಒದಗಿಸಿದ ಕಾರಿನಲ್ಲಿ ಅವರು ಪಯಣಿಸುತ್ತಾರೆ. ಈಗ ಅವರ ದರ್ಶನಕ್ಕೆ ಸಾಲಾಗಿ ನಿಂತು ಕಾಯಬೇಕಾಗಿಲ್ಲ. ದೈನಂದಿನ ಪೂಜಾದಿಗಳನ್ನೆಲ್ಲಾ ಮುಗಿಸಿ ಅವರು ಭಸ್ಮಧಾರಿಗಳಾಗಿ ಕಛೇರಿಯ ಕೋಣೆಗೆ ಬೆಳಗಿನ ಐದೂವರೆ ಗಂಟೆಗೆ ಬಂದು ಕುಳಿತುಕೊಳ್ಳುತ್ತಾರೆ. ಆಗ ಅವರ ದರ್ಶನಭಾಗ್ಯ ಎಲ್ಲರಿಗೂ, ದೂರದ ಗುಲಬರ್ಗಾ, ರಾಯಚೂರು, ವಿಜಾಪುರ ಮೊದಲಾದವುಗಳಿಂದ ದರ್ಶನಕ್ಕಾಗಿ ಭಕ್ತರು ಬರುತ್ತಾರೆ. ದರ್ಶನವಾಗುತ್ತಿದ್ದಂತೆ ಸಾಷ್ಟಾಂಗ ನಮಸ್ಕಾರ ಮಾಡುವವರನ್ನು ಸ್ವಾಮೀಜಿಯವರು ಪ್ರೀತಿಯಿಂದ ಕೇಳುವ ಪ್ರಶ್ನೆ ಮಳೆ-ಬೆಳೆ ಎಲ್ಲಾ ಹೇಗಿದೆ ? ಎಲ್ಲಾ ಕ್ಷೇಮವೇ ? ಎಂಬುದು. ಅವರ ಉತ್ತರ ಬರುತ್ತಿದ್ದಂತೆ ತಟ್ಟನೆ ಆಶೀರ್ವಾದ ರೂಪದಲ್ಲಿ ಅವರು ಹೇಳುವ ಮಾತು : 'ಪ್ರಸಾದ ಮುಗಿಸಿಕೊಂಡು ಹೋಗಿ'. ಇಷ್ಟೆಲ್ಲದರ ಮಧ್ಯೆ ಮಠದ ಅಗತ್ಯಗಳ ಬಗೆಗೆ ಅದರಲ್ಲೂ ದಾಸೋಹದ ಬಗೆಗೆ ಚಿಂತನೆ ನಡೆಸುತ್ತಲೇ ಇರುತ್ತಾರೆ.

ಅಂದು ಭಕ್ತರು ಯಾರೂ ದರ್ಶನಕ್ಕೆ ಬಂದಿಲ್ಲ ಎಂದಾದರೆ ತಟ್ಟನೆ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಬೋಧಿಸಲು ಹೊರಟು ಬಿಡುತ್ತಾರೆ.

ಇನ್ನೂ ಆಶ್ಚರ್ಯದ ಸಂಗತಿಯೆಂದರೆ ಬಿಡುವು ದೊರೆಯಿತೆಂದರೆ ನೇರವಾಗಿ ಮಠದ ಹೊಲಗದ್ದೆಗಳ ಕಡೆಗೆ ಕಾಲುಗಳು ಚಲಿಸಿ ಬಿಡುತ್ತವೆ, ಜೊತೆಯಲ್ಲಿ ಅಧ್ಯಾಪಾಧಿಕಾರಿಗಳು ಮತ್ತಿತರರು ಇದ್ದರೆ ಅಗತ್ಯ ವ್ಯವಹಾರಗಳ ಬಗೆಗೆ ಚಿಂತಿಸುತ್ತಾ ಪ್ರಶ್ನಿಸುವರು, 'ಶಿವಯೋಗಿ ಶರಣರು ವೃಥಾ ಸವೆಯಬಾರದು' ಅಲ್ಲವೆ ?

ಹಿಂದಿರುಗಿ ಮಠಕ್ಕೆ ಬಂದರೆ ವಿದ್ಯಾರ್ಥಿಗಳ ದಾಸೋಹದ ಮಂಟಪಕ್ಕೆ ನೇರ ನಡಿಗೆ, ಅಲ್ಲಿ ವಿದ್ಯಾರ್ಥಿಗಳಿಗೆಲ್ಲ ಆಹಾರ ವಿತರಣೆಯಾಯಿತೆ ಇಲ್ಲವೆ ಎಂಬುದರ ಖುದ್ದು ಪರಿಶೀಲನೆ.

ಈ ಮಧ್ಯೆ ಪರಊರಿನ ಭಕ್ತರಾರಾದರೂ ದರ್ಶನಕ್ಕೆ ಬಂದಿದ್ದಾರೆಂದು ಸುದ್ದಿ ಬರುತ್ತಿದ್ದಂತೆ ನೇರ ಕಛೇರಿಗೆ ಬಂದು ಪೀಠದಲ್ಲಿ ಕುಳಿತು ಬಿಡುವರು. ಅಂಥ ಸಂದರ್ಭಗಳಲ್ಲಿ ನನಗೆ ನೆನಪಿರುವ ಎರಡು ಸಂಗತಿಗಳನ್ನಷ್ಟೆ ಇಲ್ಲಿ ದಾಖಲಿಸಬಯಸುತ್ತೇನೆ.

೧೯೭೧ ರ ಸುಮಾರು, ಗಾಂಧಿಜಿಯವರನ್ನು ಕುರಿತು ನಾಡಿನ ಹಿರಿಯರು ಬರೆದ ಕವಿತೆಗಳನ್ನು ಸಂಪಾದಿಸುವ ಜವಾಬ್ದಾರಿ ನನ್ನದಾಗಿತ್ತು. ಪೂಜ್ಯ ಸ್ವಾಮೀಜಿಯವರು ಆ ಸಮಿತಿಯ ಗೌರವಾಧ್ಯಕ್ಷರು, ನಾವೆಲ್ಲ ಅವರನ್ನು ಕಾಣಲು ಬೆಳಿಗ್ಗೆ ಆರು ಗಂಟೆಗೆ ಮಠದ ಸ್ವಾಮೀಜಿಯವರ ಕಛೇರಿಗೆ

* ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಹೋದೆವು. ಪ್ರಸನ್ನವದನರಾಗಿ, ತ್ರಿಪುಂಡ್ರಧಾರಿಗಳಾಗಿ ಸ್ವಾಮೀಜಿ ವಿರಾಜಮಾನರಾಗಿದ್ದರು. ಭಕ್ತರು, ಗಣ್ಯರೂ ಇರಲಿಲ್ಲ. ಸ್ವಾಮೀಜಿ ಅಂದು ನಮ್ಮೆದುರು ತಮ್ಮ ನೆನಪಿನ ಉಗ್ರಾಣದೊಳಕ್ಕೆ ಇಳಿದು ಬಿಟ್ಟರು. ಟಿ.ಎಸ್. ವೆಂಕಣ್ಣಯ್ಯನವರು, ಅಂದಿನ ಸೆಂಟ್ರಲ್ ಕಾಲೇಜಿನ ಮುಖ್ಯೋಪಾಧ್ಯಾಯ, ಪ್ರಿನ್ಸಿಪಾಲರು, ಎಲ್ಲರ ನೆನಪುಗಳನ್ನು ನಮ್ಮೆದುರು ಮೆಲುಕ ಹಾಕ ತೊಡಗಿದರು. ಅವರೆಲ್ಲಾ ಎಂಥ ಜ್ಞಾನದ ನಿಧಿ ಆಗಿದ್ದರು, ಎಷ್ಟು ಶಿಷ್ಯ ವತ್ಸಲರಾಗಿದ್ದರು ಮತ್ತೆ ಅವುಗಳೆಲ್ಲಕ್ಕಿಂತ ಮಿಗಿಲಾಗಿ ಎಂಥ ಅದ್ಭುತ ವ್ಯಕ್ತಿತ್ವವನ್ನು ಹೊಂದಿದ್ದರು ಎಂಬುದನ್ನು ನೆನೆಯುತ್ತಾ ಅಂದಿನವರ ಮೌಲ್ಯಗಳನ್ನು ಚಪ್ಪರಿಸುತ್ತಾ ಸ್ವಾದಿಸುತ್ತಿದ್ದುದು ನಮಗೆಲ್ಲ ಒಂದು ಅದ್ಭುತವಾದ ಔತಣವೇ. ಆಶ್ಚರ್ಯವೆಂದರೆ ಹೀಗೆ ನೆನಪಿನ ಉಗ್ರಾಣದಿಂದ ಒಂದೊಂದೇ ಘಟನೆಗಳನ್ನು ಹೇಳುತ್ತಾ ಸಂಭ್ರಮಿಸುತ್ತಿರುವಾಗಲೇ ಹಾಸನ ಜಿಲ್ಲೆಯಿಂದ ಮಠಕ್ಕೆ ತೀರ ಪರಿಚಿತರಾಗಿದ್ದ ಭಕ್ತರ ಸಮುದಾಯ ಬಂದು ದರ್ಶನಕ್ಕೆ ಕಾದಿದ್ದಾರೆ ಎಂದು ಆಡಳಿತಾಧಿಕಾರಿ ಸೂಚಿಸಿದರು. ಎಂಥ ವಿಸ್ಮಯ! ಮರುಕ್ಷಣದಲ್ಲಿ ಸ್ವಾಮೀಜಿಯವರು ಅವರನ್ನು ಒಳಕ್ಕೆ ಕಳುಹಿಸಿ, ಇದೇನು ಗುಟ್ಟಿನ ಸಮಿತಿಯ ಸಭೆಯಲ್ಲ ಎಂದರು. ಅವರು ಒಳಕ್ಕೆ ಬಂದು ಸಾಷ್ಟಾಂಗ ಪ್ರಣಾಮ ಮಾಡುತ್ತಿದ್ದಂತೆಯೇ ಒಬ್ಬೊಬ್ಬರನ್ನು ಅವರ ಹೆಸರು ಹಿಡಿದು ಮಾತಾಡಿಸಿ ಕ್ಷೇಮ ಸಮಾಚಾರ ವಿಚಾರಿಸಿದರು. ಅಲ್ಲದೆ ಮಳೆ ಬೆಳೆಗಳ ವಿಚಾರವನ್ನು ತಿಳಿದರು. ಇಲ್ಲಿ ನಮಗೆ ಅಚ್ಚರಿ ಉಂಟು ಮಾಡಿದ್ದು ನಮ್ಮ ಶಿಕ್ಷಣ ಕಾಲದ ನೆನಪುಗಳು ಸಂಭ್ರಮಿಸುತ್ತಿದ್ದ ಜೀವ-ಭಕ್ತಾದಿಗಳಿಗಾಗಿ ತನ್ನೆಲ್ಲಾ ಸಂಭ್ರಮೋತ್ಸಾಹಗಳನ್ನು ಸಂಭ್ರಮಿಸಿ ಸಾರ್ವಜನಿಕಕ್ಕೆ ಸ್ವಾಮೀಜಿಯವರು ತಮ್ಮನ್ನು ಅರ್ಪಿಸಿಕೊಂಡಿದ್ದ ರೀತಿ. ಹೌದು ಸಮುದಾಯಕ್ಕೆ ತನ್ನನ್ನು ಅರ್ಪಿಸಿಕೊಂಡ ಜೀವಕ್ಕೆ ವೈಯಕ್ತಿಕ ಬದುಕು ಎನ್ನುವುದು ಎಲ್ಲಿ ಸಾಧ್ಯ!

ಇನ್ನೊಂದು ಸಂದರ್ಭ. ಮಿತ್ರರಾಗಿದ್ದ ಪ್ರೊ. ಚನ್ನವೀರಯ್ಯನವರೊಂದಿಗೆ ಯಾವುದೋ ಕಾರಣ-ನೆನಪಾಗುತ್ತಿಲ್ಲಾ ಬೆಳ್ಳಂಬೆಳಗ್ಗೆ ಆರು ಗಂಟೆಗೆ ಸ್ವಾಮೀಜಿಯವರ ದರ್ಶನಕ್ಕೆ ಹೋಗಿದ್ದೆವು. ಆ ಕಾಲಕ್ಕೆ ಸರಿಯಾಗಿ ಅಂದಿನ ದಿನಪತ್ರಿಕೆ ಬಂದಿತು. ಅದರ ತಲೆಬರಹಗಳನ್ನು ಓದುತ್ತಿದ್ದಂತೆ ಸ್ವಾಮೀಜಿಯವರ ಹಣೆಯಲ್ಲಿ ಚಿಂತನೆಯ ಗೆರೆಗಳು ಕಾಣಿಸಿದವು. ಈ ಸಂದರ್ಭವನ್ನು ಅರ್ಥಮಾಡಿಕೊಳ್ಳುವುದು ನಮಗೆ ಕಷ್ಟವಾಯಿತು. ಪೂಜ್ಯರೇ ತಮ್ಮ ಬಳಿಯಿದ್ದ ಇನ್ನೊಂದು ಪತ್ರಿಕೆಯನ್ನು ನಮ್ಮತ್ತ ನೀಡಿದರು. ಆಗ ಅರಿವಾಯಿತು ನಮಗೆ, ಸ್ವಾಮೀಜಿಯವರ ಹಣೆಯಲ್ಲಿ ಮೂಡಿದ ಗೆರೆಗಳ ಕಾರಣ. ಸ್ವಾಮೀಜಿ ಉದ್ಗರಿಸಿದರು: "ಪರೀಕ್ಷೆಗಳು ಮುಂದಕ್ಕೆ ಹೋಗಿವೆ. ಅದಕ್ಕೆ ದಾಸೋಹದ ವ್ಯವಸ್ಥೆ ಮಾಡಿಕೊಳ್ಳಬೇಕಾಗಿದೆ."

ಇಷ್ಟೆಲ್ಲ ಕ್ಷಣಾರ್ಧದಲ್ಲಿ ಆಗಿದೆ, ಮರುಕ್ಷಣವೆ ಮಠದ ಪಾರುಪತ್ತೆದಾರರು ಓಡೋಡಿ ಒಳಕ್ಕೆ ಬಂದು "ಬುದ್ಧಿ ಗೌರಿಬಿದನೂರಿನ ಭಕ್ತರು ಬಂದಿದ್ದಾರೆ. ಎರಡು ಲಾರಿಗಳ ತುಂಬ ಮಠಕ್ಕೆ ಅಗತ್ಯವಾದ ದವಸ ಧಾನ್ಯಗಳಿವೆ" ಎಂದು ಉಸಿರು ಬಿಡದೆ ನಿವೇದಿಸಿದರು. ನಾವು ಆಗ ಸ್ವಾಮೀಜಿಯವರ ಮುಖದತ್ತ ಕಣ್ಣಾಡಿಸಿದೆವು. ಅಲ್ಲಿ ಒಂದು ಬಗೆಯ ನೆಮ್ಮದಿಯ ಬೆಳಕಿತ್ತು. "ಸಿದ್ಧಲಿಂಗನೇ ಹೀಗೆ, ಎಲ್ಲವನ್ನೂ ನಡೆಸುತ್ತಾ ಬಂದಿದ್ದಾನೆ" ಎಂದು ಉದ್ಗರಿಸಿದರು.

ಇಂಥ ದರ್ಶನಗಳು ಒಂದೆರಡರಲ್ಲ ಅಸಂಖ್ಯಾತ ವಾಗಿವೆ. ಅವುಗಳ ವಿವರಕ್ಕೆ ಇದು ಸಕಾಲವಲ್ಲ.

ಅವರ ದರ್ಶನಕ್ಕೆಂದು ಯಾವಾಗ ಬೇಕಾದರೂ ಸಿದ್ಧಗಂಗೆಗೆ ಬರಬಹುದು. ಅಲ್ಲಿ ಜಾತಿಯ ಅಡತಡೆಗಳಿಲ್ಲ. ಅಂತಸ್ತಿನ ಅವಾಂತರವಿಲ್ಲ; ಬಡವ ಬಲ್ಲಿದ-ಪುರುಷ-ಸ್ತ್ರೀಯ ಭೇದವಿಲ್ಲ. ತಂದೆಯನ್ನು ಕಾಣಲು ಮಕ್ಕಳು ಹಾತೊರೆಯುವಂತೆ ಭಕ್ತರು ಹಾತೊರೆಯುತ್ತಾರೆ. ಅವರ ದರ್ಶನಾಶೀರ್ವಾದಗಳಿಗೆ ಅಮಾವ್ಯಾಸೆಯ ದಿನ ಮಾತ್ರ ಅವರು ಹಳೆಯ ಪ್ರಸಾದ ಗೃಹದ ಮುಂಭಾಗದಲ್ಲಿರುವ ದೊಡ್ಡ ಮಂಚದ ಮೇಲೆ ಕಾಯುತ್ತ ಕುಳಿತು ಬಿಡುತ್ತಾರೆ, ಅಂದಿನ ಕಾಯಕ, ಬಂದ ಭಕ್ತರ ಅಪೇಕ್ಷೆಯಂತೆ ಯಂತ್ರಗಳನ್ನು ಬರೆದು ಕೊಟ್ಟು ಆಶೀರ್ವದಿಸುವುದು. ಯಂತ್ರ ತಂತ್ರಗಳನ್ನು ಅವರು ನಂಬುತ್ತಾರೆಯೆ? "ಭಕ್ತರಿಗೆ ಅದರಿಂದ ಶಾಂತಿ ದೊರೆತರೆ ನಾನೇಕೆ ಅಡ್ಡಿಬರಲಿ" ಎಂಬುದು ಅವರ ಧೋರಣೆ. ಡಿವಿಜಿಯವರು ಕನ್ನಡದಲ್ಲಿ ಹೇಳಿಲ್ಲವೆ?

***ನಂಬಿದನು ಪ್ರಹ್ಲಾದ-ನಂಬದಿದ್ದನು ತಂದೆ***
***ಕಂಬದಿನೂ ಬಿಂಬದಿನೊ ಮೋಕ್ಷ ಅವರಿಂಗಾಯ್ತು***
***ನಂಬಿಯೂ ನಂಬದಿರುವಿಬ್ಬಂದಿ ನೀನು***
***ಸಿಂಬಳದಿ ನೊಣ ಕಾಣೊ ಮಂಕುತಿಮ್ಮ***

ಯಾವುದು ಮೂಢನಂಬಿಕೆ, ಯಾವುದು ನಿಜವಾದ ನಂಬಿಕೆ, ಇವುಗಳ ಮಧ್ಯದ ಗೆರೆ ಬಹಳ ಸೂಕ್ಷ್ಮ ಹಾಗೆಯೇ ಧರ್ಮದರ್ಶನ ಕೂಡ. ಅವರವರ ನಂಬಿಕೆಗೆ ಸಂಬಂಧಿಸಿ ದಂತೆ ಅಲ್ಲವೆ?

**ಧರ್ಮದರ್ಶನ – ಭಾಗ-೨**

ಸದಾ ಹಸನ್ಮುಖಿಗಳಾಗಿಯೇ ದರ್ಶನ ನೀಡುವ ಈ ಶತಾಯುಷಿಯ ಬದುಕಿನ ಗುಟ್ಟು ಏನು ಎಂದರೆ ವಿಸ್ಮಯಗೊಳ್ಳಬೇಕಾಗಿತ್ತು.

ಧ್ಯೇಯಾರ್ಪಿತವಾದ ಈ ಜೀವ ಮಿತಾಹಾರ, ಯೋಗ, ಧ್ಯಾನಗಳಿಂದ ಈ ಪ್ರಸನ್ನತೆಯನ್ನು ಸಿದ್ಧಿಸಿಕೊಂಡಿದೆ. ಅವರಿಗೆ ಸಿದ್ಧಿಸಿರುವ ಚಿತ್ತೈಕಾಗ್ರತೆ ಹಾಗೂ ಸ್ಮೃತಿಸಂಪನ್ನತೆಗಳು ಬೆರಗುಗೊಳಿಸುವಂಥವು. ಕಛೇರಿಯಲ್ಲೊಮ್ಮೆ ಕುಳಿತರೆಂದರೆ, ಅವರೆದುರಿಗೆ ಎರಡು ಕಾರ್ಯಗಳು ಸದಾ ಸಿದ್ಧವಾಗಿರುತ್ತವೆ.





ಒಂದು ಮಠಕ್ಕೆ ಸಂಬಂಧಿಸಿದ, ಒಂದು ವಿಶ್ವವಿದ್ಯಾಲಯ ಎನಿಸ ಬಹುದಾದಷ್ಟು ಬೃಹತ್ತಾದ ಹಾಗೂ ಸಂಕೀರ್ಣವಾದ ಆಡಳಿತ, ಅದರ ಜೊತೆ ಜೊತೆಗೆ ಮಠದ ವ್ಯವಸ್ಥೆಗೆ ಸಂಬಂಧಿಸಿದಂತೆ ದಾಸೋಹಾದಿಗಳ ನಿರ್ವಹಣೆಯ ಜವಾಬ್ದಾರಿ.

ಅವರ ಗುರುಗಳಾದ ಉದ್ದಾನೇಶ್ವರರೇನೋ ಆಶೀರ್ವದಿಸಿ ಕೊಟ್ಟ ರುದ್ರಾಕ್ಷಿ ಮಾಲೆಯಿದೆ. ಜೊತೆಗೇ ಜೋಳಿಗೆಯೂ ಇದೆ. ಜೊತೆ ಜೊತೆಗೆ ಆಶೀರ್ವಾದ ಶಕ್ತಿ ಕೂಡ ಅಕ್ಷಯ ಪಾತ್ರೆಯಂತಿದೆ. ಇನ್ನೊಂದು ಅವರ ದರ್ಶನಾಶೀರ್ವಾದಗಳಿಗಾಗಿ ಬರುವ ಭಕ್ತಾದಿಗಳು ಮತ್ತು ಅಭಿಮಾನಿಗಳು ಅವರ ಜೊತೆಗೇ ವಿದ್ಯಾರ್ಥಿ ನಿಲಯಗಳಿಗೆ ವಿಧ ವಿಧವಾದ ಉದ್ಯೋಗಗಳಿಗೆ ಆಕಾಂಕ್ಷಿಗಳಾಗಿ ಬರುವ ಜನ ಸಮುದಾಯ. ಈ ಮಧ್ಯೆ ಬಿಡುವು ಸಿಕ್ಕಿತೆನ್ನಿ!

ಸ್ವಾಮೀಜಿ ತಟ್ಟನೆ ತಮ್ಮೊಳಗೆ ತಾವಿಳಿದು ಬಿಡುತ್ತಾರೆ, ಈ ನಿಡು ಬಾಳಿಗೆ ಒಂದು ದಿಕ್ಕು ತೋರಿದ ಉದ್ದಾನೇಶ್ವರರು ಎದುರು ನಿಲ್ಲುತ್ತಾರೆ. 'ಆ ಉದ್ದಾನೇಶ್ವರರು ಇವರನ್ನು ಈ ರೀತಿ ರೂಪಿಸುವುದಕ್ಕೆ ಮಾಡಿದ ಯತ್ನಗಳು ನೆನಪಾಗುತ್ತವೆ, ಅಂದಿನ ಅಧಿಕಾರದಿಂದ ಹಿಂದೆ ಇದ್ದದ್ದು ಬಹುದೂರ ದೃಷ್ಟಿಯ ಕೃಪಾದೃಷ್ಟಿ. ಈಗದು ಆಶೀರ್ವಾದ ರೂಪವಾಗಿ ನಿಂತಿದೆ. ತಾವು ಸಾಧಿಸಿರುವ ಸಂಯಮದ ಬಗೆಗೆ ತ್ಯಾಗದ, ಯೋಗದ ಬಗೆಗೆ ಅಂದು ಅವರು ಕಣ್ಣರಿಕೆಯಲ್ಲೆ ನೀಡಿದ ಮಾರ್ಗದರ್ಶನ ರೋಮಾಂಚನ ಉಂಟುಮಾಡುತ್ತದೆ. "ಹೌದು ಹೌದು ಅವರದು ಪರ್ವತ ರೀತಿಯ ಪರೀಕ್ಷೆಗಳಿಗೆ ಒಡ್ಡಿದ ಚೇತನ್ಯ, ಶಿಲ್ಪಿ ಕಲ್ಲನ್ನು ಕೊರೆಯುತ್ತಾನಲ್ಲ, ಹಾಗೆ! ತನಗೆ ಸಿದ್ಧಿಸಬೇಕಾದ ರೂಪು ಮೂಡುವವರೆಗೂ ಕೊರೆಯುತ್ತಲೇ ಕಡೆಯುತ್ತಲೇ ಹೋಗುತ್ತಾನೆ. – ಆ ಎಲ್ಲ ಕ್ರಿಯೆಗಳ ಹಿಂದೆ ಸಂಕಲ್ಪವೊಂದಿದೆ; ಆ ಸಂಕಲ್ಪವನ್ನು ಕಾರ್ಯರೂಪಕ್ಕೆಳೆಸುವುದೇ ಆ ಕ್ರಿಯೆ! ಇಷ್ಟೊಂದು ಬೃಹದಾಕಾರವಾಗಿ ಬೆಳೆದಿರುವ ಈ ದಾಸೋಹದ ಮಠ ಮುನ್ನಡೆಯುವುದಾದರೂ ಹೇಗೆ? ಈ ಎಲ್ಲಾ ನೆನಪುಗಳಿಂದ ಪುಲಕಿತರಾಗುತ್ತಾರೆ.

ಮತ್ತಷ್ಟು ಬಿಡುವು ದೊರೆಯಿತೆನ್ನಿ! ಯಾವಾಗಲೂ ಒಂದು ಪುಸ್ತಕ ಜೊತೆಯಲ್ಲೇ ಇರುತ್ತದಲ್ಲ! ಅದರ ಅಧ್ಯಯನದಲ್ಲಿ ಮುಳುಗಿಬಿಡುತ್ತಾರೆ, ಓದುತ್ತ ಓದುತ್ತ ಅರಿವಿನ ದಿಗಂತಗಳು ವಿಸ್ತಾರವಾಗುತ್ತ ನಡೆದಂತೆ ಮಠದ ಕಾರ್ಯಕ್ಷೇತ್ರದ ವಿಸ್ತರಣೆ ಕೂಡ ನಡೆಯುತ್ತದೆ, ಓದುವುದು ಕೂಚಂಭಟ್ಟರಾಗುವುದಕ್ಕಲ್ಲ! ಇನ್ನಷ್ಟು ಮತ್ತಷ್ಟು ಬೆಳೆಯುವುದಕ್ಕೆ, ಬೆಳಗುವುದಕ್ಕೆ.

ಇಷ್ಟೆಲ್ಲ ಇದ್ದರೂ ಈ ಧ್ಯಾನ, ಈ ಯೋಗ – ಎಲ್ಲಕ್ಕೂ ಲೋಕ ಮುಖವಾದ ದೃಷ್ಟಿ ಇರಲೇಬೇಕಲ್ಲವೆ! ☐

## ಪೂಜ್ಯ ಶ್ರೀಗಳವರ ದಿವ್ಯಚರಣಗಳಿಗೆ

ಸಿದ್ಧಗಂಗಾ ಶ್ರೀಗಳು ಇವರು ಸಿದ್ಧಗಂಗಾ ಶ್ರೀಗಳು
ಸಿದ್ಧಗಂಗಾ ಶ್ರೀಗಳು ಶಿವಕುಮಾರ
ಮಹಾಸ್ವಾಮಿಗಳು ॥ ಪ ॥

ಉದ್ದಾನಶ್ರೀಗಳು ವಹಿಸಿದ ಕೆಲಸವ
ಪ್ರೀತಿಯಿಂದಲೇ ಸ್ವೀಕರಿಸಿದರಂದು
ಕಷ್ಟದಲ್ಲಿದ್ದ ಶ್ರೀಕ್ಷೇತ್ರವನ್ನು
ಉತ್ತುಂಗಕೊಯ್ದರು ಶ್ರೀ ಶಿವಕುಮಾರ
ಸ್ವಾಮಿಗಳು ॥ ಸಿದ್ಧಗಂಗಾಶ್ರೀ ॥

ಹಳ್ಳಿ ಹಳ್ಳಿಗೂ ಭೇಟಿಯ ನೀಡಿ
ಭಕ್ತರನ್ನೆಲ್ಲಾ ಒಟ್ಟು ಗೂಡಿಸಿ
ಭಿಕ್ಷೆಯ ಬೇಡಿ ಬಂದ ದಾನ್ಯದಿಂದ
ಕ್ಷೇತ್ರವ ಬೆಳೆಸಿದರು
ಶ್ರೀ ಸಿದ್ಧಗಂಗಾ ಕ್ಷೇತ್ರವ ಬೆಳೆಸಿದರು
ಶ್ರೀ ಶಿವಕುಮಾರ ಸ್ವಾಮಿಗಳು ॥ ಸಿದ್ಧಗಂಗಾಶ್ರೀ ॥

ಗ್ರಾಮೀಣ ಮಕ್ಕಳ ಏಳಿಗೆಗಾಗಿ
ಹಳ್ಳಿ ಹಳ್ಳಿಯಲಿ ಶಾಲೆಯ ತೆರೆದು
ಬಡವರು ಎನ್ನದೆ ಬಲಿದರೂ ಎನ್ನದೆ
ಶಿಕ್ಷಣ ನೀಡಿದರೂ ಆಹಾ ಸಂಸ್ಕೃತಿ ಬೆಳೆಸಿದರೂ
ಶ್ರೀ ಶಿವಕುಮಾರ ಸ್ವಾಮಿಗಳು ॥ ಸಿದ್ಧಗಂಗಾಶ್ರೀ ॥

ಬಸವೇಶ್ವರ ತದ್ರೂಪದಂತೆ
ಧೀನ ದಲಿತರ ಉದ್ಧಾರಕ್ಕಾಗಿ
೧೦೦ ವಸಂತ ಮುಗಿಸಿದರೂ
ದರ್ಶನ ನೀಡುವರು ಭಕ್ತರಿಗೆ
ಆಶೀರ್ವಾದ ಮಾಡುವರು
ಶ್ರೀ ಶಿವಕುಮಾರ ಸ್ವಾಮಿಗಳು ನಮ್ಮ
ಶ್ರೀ ಶಿವಕುಮಾರ ಸ್ವಾಮಿಗಳು ॥ ಸಿದ್ಧಗಂಗಾಶ್ರೀ ॥

**– ನಟರಾಜ್ ಬ್ಯಾಲಕೆರೆ**

ಆಕಾಶವಾಣಿ ಜನಪದ ಗಾಯಕರು
ನಂ. 11, ಶ್ರೀ ರೇವಣಸಿದ್ದೇಶ್ವರ ನಿಲಯ
9ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಸಂಜೀವಿನಿನಗರ
ಮೂಡಲಪಾಳ್ಯ, ಬೆಂಗಳೂರು-72



# ಸಿದ್ಧಗಂಗೆಯ ಶಿವಯೋಗ ಚೈತನ್ಯ, ಅಧ್ಯಾತ್ಮಿಕ ಸೋನೆಯ ಸಾಕಾರರೂಪ ಕರ್ನಾಟಕ ರತ್ನ, ಪದ್ಮಭೂಷಣ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು

– ಡಾ. ಎಂ.ಜಿ. ನಾಗರಾಜ್ *

ಸಿದ್ಧಗಂಗೆ ಶಿವಸಿರಿಯ ಸದಾ ಸನ್ನಿಧಿ, ಗಂಗೆ ಚಿಮ್ಮಿದ ಜಲಸೌಭಾಗ್ಯ ನಿಧಿ. ಈ ಶಿವನಾಕದ ಬೀಡಿನಲ್ಲಿ ಕಾಯಕಕ್ಕೆ ಕಳಾತ್ಮಕ ನವಭಾಷ್ಯವನ್ನು ಸ್ವಮಾದರಿಯಿಂದ ಬರೆದವರು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು. ನಾಡು ಕಂಡ ಧೀರ ಮಹಾಶಿವಯೋಗಿ. ಅಧ್ಯಾತ್ಮಿಕ ಸೋನೆಯಲ್ಲಿ ಸನಿಹ ಬಂದವರಿಗೆಲ್ಲ ಮಿಾಯಿಸಿದ ವೀರಶಿವಯೋಗಿ. ಕ್ರಿಯಾ ಯೋಗದ ಸಾಕಾರ ಚೈತನ್ಯರೂಪ ಅವರಾಗಿದ್ದಾರೆ.

ವೀರಾಪುರದ ಕೂಸಾಗಿ ಹಳ್ಳಿಯ ಬಳ್ಳಿ ಬಿಟ್ಟ ಸತ್ಫಲ, ಇದು ನಾಡಿಗೆ ಮಾಗಿದ ಮಾದರಿ ಫಲ. ಕಾಯಕದ ಶ್ರೀಫಲದ ಸವಿಯನ್ನು ನಾಡಿಗೆ ಉಣಿಸಿದ ಈ ಮಹಾಚೈತನ್ಯದ ಬೆಳಕಿನಲ್ಲಿ, ಬಾಳನ್ನು ಬೆಳಗಿಸಿಕೊಂಡವರು ಅಸಂಖ್ಯಾತ.

ಮನುಜನ ಬಾಳು ಶತಮಾನದ ಆಚೆಯವರೆಗೂ ಬಾಳಿ ಬೆಳಗುವಲ್ಲಿ ಅದಕ್ಕೆ ಮಾಡಿದ ಕಾಯಕವೇ ಸಾಕ್ಷಿ. ಒಟ್ಟಾರೆ ಆಯುರ್ಮಿತಿಯಲ್ಲಿ ಸಾಗುವ ಬದುಕು ಅನಂತವಾಗುವುದು, ನಡೆಸಿದ ಶಿವಕಾಯಕದ ಫಲವೇ ಆಗುತ್ತದೆ. ಅಂತ್ಯದ ಸೀಮೆಯು ಬಾಳಿನಲ್ಲಿ ಅನಂತವಾಗುವುದು ಈ ಕಾರಣಕ್ಕಾಗಿಯೆ.

ಅಂಗದ ಮೇಲೆ ಲಿಂಗವಿದ್ದರೆ, ಶಿವಸಂಚಾರ, ಮಂಗಳಕ್ಕೆ ಆಕರ, ಆಧಾರ. ಅದು ಲಿಂಗಾಂಗಗಳಲ್ಲಿ ಶಿವದ ಸೊಲ್ಲಿನ ಅರ್ಥಾತ್ ಮಂಗಳದ ಮಾತಿನ ಸ್ಫುರಣಕ್ಕೆ ತೇಜೋದ್ಭವಕ್ಕೆ ಎಡೆಯಾಗುತ್ತದೆ. ಈ ಹಿನ್ನೆಲೆಯಲ್ಲಿ ಸಿದ್ಧಗಂಗೆಯ ಈ ಮಹಾನ್ ವ್ಯಕ್ತಿತ್ವದ ನುಡಿಯಲ್ಲಿ ಶಿವನುಡಿ, ನಡೆಯಲ್ಲಿ ಶಿವನಡೆ, ಕೇಳುವೆಯಲ್ಲಿ ಶಿವನಾದ, ನೋಟದಲ್ಲಿ ಶಿವದೃಷ್ಟಿ, ಚಲನೆಯಲ್ಲಿ ಶಿವಪಥ, ಹೀಗೂ ವ್ಯಕ್ತಿತ್ವದ್ದು ಸಾಗಿ ಬಂದ ಮಂಗಳದ ಹಾದಿಯಾದ ಕಾರಣ, ಅಶನ, ಆಸರೆ, ಅರಿವು, ಅಧ್ಯಾತ್ಮದ ನೆಲೆಯಾಗಿ ಸಿದ್ಧಗಂಗೆ ಕಂಗೊಳಿಸಲು ಕಾರಣವಾಯಿತು. ಈ ಸಂದರ್ಭಕ್ಕೆ ಸಾಕ್ಷ್ಯಗಳ ಕೊರತೆ ಇಲ್ಲ.

ಡಿಸೆಂಬರ್ ೧೯೬೩, ೪೪ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಡಾ. ರಂ.ಶ್ರೀ ಮುಗಳಿ ಅವರ ಸರ್ವಾಧ್ಯಕ್ಷತೆಯಲ್ಲಿ ಸಿದ್ಧಗಂಗೆಯಲ್ಲಿ ನಡೆದ ಸಂದರ್ಭ. ಸಂಜೆಯ ಗೋಷ್ಠಿಯಲ್ಲಿ ನೆರೆದ ಜನತೆ, ಅಧ್ಯಕ್ಷರು ಆಸೀನರಾದರೂ ಗುಸುಗುಸು ಗುಂಗಿನಲ್ಲಿಯೇ ಇತ್ತು. ಆಗ ಎಲ್ಲಿಯೋ ಕಾಣದಂತೆ ಆಸೀನರಾಗಿದ್ದ ಪೂಜ್ಯ ಶ್ರೀಗಳು ಎದ್ದು ಬಂದು ಹಿಂದೆ-ಮುಂದೆ ದೃಷ್ಟಿ ಕಾಯಕ ಹರಿಸಿದ್ದೇ ತಡ ಗುಸುಗುಸು ಸಭೆಯಲ್ಲಿ ಸಂಪೂರ್ಣ ನಿಶ್ಶಬ್ದ. ನಯನ ಕಾಯಕ ಸಾಧಿಸಿದ ಶಿಸ್ತಿನ ಪರಿ ಅದಾಗಿತ್ತು. ಮಾತಿಲ್ಲದ, ಹಸ್ತಚಲನೆ ಇಲ್ಲದ ನಯನ ಕಾಯಕ ಸಾಧಿಸಿದ ನಿಶ್ಶಬ್ದ ಶಿಸ್ತು. ಅರ್ಥೈಸಿಕೊಳ್ಳುವ ಅರಿವಿದ್ದಡೆ ಅವರ ಸಾನ್ನಿಧ್ಯವೆ ಒಂದು ಜ್ಯೋತಿರ್ಲಿಂಗ; ಆಧುನಿಕರಿಗೆ ಅಧ್ಯಾತ್ಮ ಹಾಗು ಸಮಾಜ ಸೇವೆಯ ಸಾಮರಸ್ಯದ ಮಾದರಿಯ ನಡೆ.

ಮಗದೊಂದು ಸಂದರ್ಭ. ಹರಳೂರಿನಲ್ಲಿ ಕವನ ಸಂಕಲನದ ಬಿಡುಗಡೆ. ಗ್ರಾಮೀಣ ಪ್ರದೇಶವೊಂದರಲ್ಲಿ ನಡೆದ ಸಾಹಿತ್ಯದ ಘಳಿಗೆ. ಅಲ್ಲಿಗೆ ಪೂಜ್ಯ ಶ್ರೀಗಳೂ ಆಶೀರ್ವದಿಸಲು ದಯಮಾಡಿಸಿದ್ದರು. ಕಾರ್ಯಕ್ರಮ ಮುಗಿದು ಹಾದಿಯಲ್ಲಿ ಬರುವಾಗ, ಸಿದ್ಧಗಂಗೆಯ ಅಂಕೆಗಿದ್ದ ಜಮೀನು ಸಾಗುವಳಿ ಆ ಗ್ರಾಮದ ಹಾದಿಯಲ್ಲಿ ನಡೆದಿತ್ತು. ವಾಹನದಲ್ಲಿ ಪ್ರಯಾಣಿಸುತ್ತಿದ್ದ ಪೂಜ್ಯ ಶ್ರೀಗಳು, ಜಮೀನು ಕಂಡೊಡನೆ ಇಳಿದು ನಡೆದು ಬಂದು ಗದ್ದೆಯ ಬದುವಿನ ಮೇಲೆ ಸಾಗಿ, ಸಾಗುವಳಿಯ ರೈತರಲ್ಲಿಗೆ ಹೋಗಿ ಕಷ್ಟ ಸುಖ ಕೇಳಿ ಕುಶಲದ ಮಾತು ಆಡಿದ ಬಗ್ಗೆ ನೋಡಿ ನನಗಂತು ಬಹಳ ಅಚ್ಚರಿಯ ಮುದಕೊಟ್ಟಿತು. ಸ್ವಾಮಿಗಳಾಗಿ, ಸಾಮಾನ್ಯ ಬದುಕಿನ ಕಷ್ಟ ನಿಷ್ಠುರಗಳಿಗೆ ದನಿಯಾಗುವ ಅವರ ಕಳಕಳಿ ಕಂಡ ನಾನು ಮನಸಾ ಶಿರಸಾಷ್ಟಾಂಗ ಮಾಡಿದೆ.

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦





ಈಚೆಗೆ ಮೂರು ವರ್ಷಗಳ ಹಿಂದೆ ೨೦೧೪ರಲ್ಲಿ ನನಗೆ ಗೋಸಲ ಪ್ರಶಸ್ತಿಯು ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ದತ್ತವಾದ ಸಂದರ್ಭ. ಸಮಾರಂಭವನ್ನು ಸಂಸ್ಕೃತ ಕಾಲೇಜಿನ ೫೦ ಮೆಟ್ಟಿಲುಗಳು ಮೇಲೆ ವ್ಯವಸ್ಥೆಗೊಳಿಸಿ ದುದುದಾಗಿತ್ತು. ೧೦೭ ವರ್ಷ ವಯಸ್ಸಿನಲ್ಲೂ ದೈಹಿಕ ಚೈತನ್ಯವನ್ನು ಕಾಪಿಟ್ಟುಕೊಂಡಿದ್ದ ಪೂಜ್ಯ ಶ್ರೀಗಳು ೫೦ ಮೆಟ್ಟಿಲುಗಳನ್ನು ಸರಾಗವಾಗಿ ಹತ್ತಿ ಬಂದು ನನಗೆ ಪ್ರಶಸ್ತಿಯನ್ನು ದಯಪಾಲಿಸಿದರು. ಇದನ್ನೆಲ್ಲ ಕಂಡರೆ ಆ ಮಹಾಚೈತನ್ಯಕ್ಕೆ ಯಾರೇ ನತಮಸ್ತಕರಾಗುತ್ತಾರೆ. ಅವರ ಮನೋಚೈತನ್ಯದ ಮುಂದೆ ದೇಹದ ಚೈತನ್ಯ ಮತ್ತಷ್ಟು ಪುಟಿದು ಉಕ್ಕಿ ಬರುತ್ತದೆ. ಸಾಹಿತಿಗಳಿರಲಿ, ಭಕ್ತರಿರಲಿ, ದಾನಿಗಳಿರಲಿ, ವಿದ್ವಾಂಸರಿರಲಿ, ಯಾರೇ ಮಾನವ ಜೀವಿಗಳಿರಲಿ, ಸಕಲ ಜೀವಾತ್ಮರಿಗೆ ಲೇಸ ಬಯಸುವ ಮಹಾ ಶಿವಯೋಗಿಯಾಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಕಾಣಬರುತ್ತಾರೆ. ಇಂಥವರ ಸಾಧನಾಕ್ಷೇತ್ರವಾಗಿ ಬೆಳೆದು ಬಂದ ಸಿದ್ಧಗಂಗೆಯಲ್ಲಿ ಈ ೨೦೧೭ರಲ್ಲಿ ನೂರ ಹತ್ತರ ಆಯುಷ್ಯ ವರ್ಧಮಾನದ ಅವಸರದಲ್ಲಿ ಎಲ್ಲದರಲ್ಲಿ ತುಂಬಿ ತುಳುಕುವ ಶಿವಕಳೆಯ ಆ ತೇಜೋಮೂರ್ತಿಯ ಚರಣಗಳಲ್ಲಿ ನಮ್ಮ ಮನ ಮಾನಸದ ನಮನ; ಹೀಗಿದೆ :

## ಶಿವಕುಮಾರ ರಕ್ಷೆ

ಶಿವಶಕ್ತಿಯುದ್ಭವದಿ ಕಾಯಕದ ಸಾಧನೆಯ ಫಲ
ವರಶಕ್ತಿ ಆವರಿಸೆ ಅಂಗದಣುಗಳಲ್ಲಿ ಲಿಂಗದಳ
ಕುಳಿರು ತಣಿದಲು ಜೀವದೊಳು ಬೇಗೆ ಹೇಗೆ !
ಮಾನ್ಯ ಇರುವವರಿಗೆ ಮಾದರಿಯಾಗಿ ಬೆಳಸಿಗೆ ಪ್ರೇರಕ
ರಾಮೇಶ ಕರುಣಿಸಿದ ಬದುಕಿಗದೆ ಸಾಫಲ್ಯ ಸೂಚಕ
ಸ್ವಾದವ ಸಾರಿ ಸುತ್ತಲಬಾಳಿಗೆ ನೆರವು ತರುವಾತ
ಮೀಟು ಬಾಳಿನಂಗಳದಿ ಕೊಟ್ಟ ಕುದುರೆಯ ನೇರಿ ಸಾಧಿಸಿದಾತ
ಜೀಯ ನೂರು ಮೀರಿ ಹತ್ತಕ್ಕೇರಿದ ಬಾಳಿನಲಿ ಅಂತ್ಯದ ಗಡಿ ಇಲ್ಲ
ಯಶಸ್ಸಿಗೆ ಅಂತ್ಯದೊಳಗೆ ಅನಂತವಾಗುವ ಚಿರಕಾಲ ನೆನಪು ನಿರಂತರವಲ್ಲ
ವರವಿರಲು ಅಚಲದೇವ ನಾಗೊಡೆಯ ಶರಣ ಮಾನಸವು
ರಕ್ಷೆಯಲಿ ಕಂಗೊಳಿಸುವೀ ಶಿವಬೆಳಕ ಗಿಂಡಿ
ಕಳೆದುಂಬುವಾ ಭಕ್ತಿ ಸುಮಗಳ ಅಂದದಾ ಸಾಲು ಚೆಲುವಿನ
ಸಿದ್ಧಗಂಗೆಗೆ ತೆಕ್ಕೆಗೊಳ್ಳುವುದೆ ಬದುಕಿಗಾಗುವ ಶ್ರೇಯದಪ್ಪುಗೆ ಕಾಣಾ
ಶ್ರೀ ಗುರುವಂದನೆಗೆ ಮನಮೇಳೈಸಿ
ಎತ್ತಿದ ಎದೆಯಾರತಿಗೆ ಸೌಭಾಗ್ಯ ನೋಡಾ.

* * *

## ಓ ಸಿದ್ಧಗಂಗೆ

ಇತಿಹಾಸ ಕಾಲಕ್ಕೆ ಹಿಂದೆ ಹಿಂದೆ ಮುಂದೆ ಮುಂದೆ
ಸಿದ್ಧಗಂಗಾ ಗಿರಿಯು ಪಾವನಕ್ಷೇತ್ರಗಿರಿ ಎಂದೆ
ರಾಮಲಿಂಗೇಶ ಗಿರಿಯ ಗವಿಯ ಗುಟ್ಟಿನ ಬಂಡೆ ಮೈ ಎಂದೆ
ಸಮ್ಮುಲ್ಲೇಖನ ಭಿತ್ತಿಯಲಿ ಪ್ರಾಗಿತಿಹಾಸ ಶಿವಚಿತ್ರ ಕಳೆ ಎಂದೆ
॥ ಓ ಸಿದ್ಧಗಂಗೆ ॥

ಸೂಕ್ಷ್ಮಶಿಲಾಯುಗ ಬೃಹತ್ ಶಿಲಾಯುಗದ ಕ್ರಿಸ್ತಪೂರ್ವದ
ಭೀಮಸೌಂಧವ ಬಂಡೆಗಳಲಿ ಕಲ್ಲಾಸರೆಯ ಮೋಹಕ ರೂಪ
ರಾಮಲಿಂಗೇಶನ ಬೃಹತ್ ಪಾದ ಬಂಡೆ
ಉಭಯಗಿರಿ ನಡುಹೆಜ್ಜೆ
ಶರಣರ ಗೋಸಲರ ತೋಂಟಸಿದ್ಧರ
ಅನುಷ್ಠಾನ ಗವಿ ಯೋಗದಾಣ
॥ ಓ ಸಿದ್ಧಗಂಗೆ ॥

ಮೇದಾರ ಕೇತನ ತಪೋನುಷ್ಠಾನ
ನೆಲೆಯಲ್ಲಿ ಕುಕ್ಕಾಡಮ್ಮ ಲೀಲೆ
ರಾಮಲಿಂಗೇಶ ಗಿರಿಯ ಹಾದಿಯಲಿ
ಉದ್ದಾನ ಶಿವಯೋಗಿ ಕಟ್ಟೆ
ದೊಡ್ಡಸಿದ್ಧೇಶನ ಗವಿಯ ಬಂಡೆ
ಮೈಯಲಿ ಪ್ರಾಗಿತಿಹಾಸ ಚಿತ್ರಲೀಲೆ
ಅವಸಿದ್ಧರ ಆವ ಮುನಿಗಳ ಶಿವಜಪದ ಶಿವಮಂತ್ರಲೀಲೆ !
॥ ಓ ಸಿದ್ಧಗಂಗೆ ॥

ಅನುಭೂತಿ ಸೃಜಿಸಿದ ವಿಭೂತಿಗಾನ ಮೂಡಿಸಿದೆ ಅನುಭಾವ
ಗವಿರ್ವಾಣ ಚಿತ್ರಗಳ ಸಂದೋಹಕ್ಕೆ ಗೋಸಲರ ಬಾಗಿಲ
ಶಾಸನದ ತೋರಣದಾರತಿ
ಅಭಿಮುಖಕ್ಕೆ ಚಿಕ್ಕಸಿದ್ಧೇಶ್ವರ ಗವಿಯ
ಬಾಗಿಲ ತೆವಳಿ ಮುಂದೆ ಸಾಗೆ
ನಂದಿ ನಮಿದ ಶಿವಲಿಂಗ ವಿಶಾಲ ಅಂಗಳದಿ
ಚೆಲುವು ಕಡೆದ ಪೀಠಸ್ಥವಾಗೆ
ಶಿವಯೋಗದನುಭವ ಗೋಷ್ಠಿಯೊಳುದಿಸಿದ್ದ ಅನುಭಾವ
ಅನುರಣಿಸಿದೆ ಶಿವನಿಸ್ವನ
॥ ಓ ಸಿದ್ಧಗಂಗೆ ॥

ಏನ ಹೇಳಲಿ ಸಿದ್ಧಗಂಗೆಯ ನಿಸರ್ಗದಂಕಣದ ಅಧ್ಯಾತ್ಮಯೋಗ
ಶರಣರಾ ನೆಲೆಯೆಂದು ಸಿದ್ಧರಾಮ, ಮೇದಾರ ಕೇತಯ್ಯರೆ
ಶರಣರು ಕಲೆತ ನೆಲೆ ಎಂಬ ಭಾವವಿರೆ
ಎಷ್ಟು ಹೊಗಳಲಿ ! ಎಷ್ಟು ಬಣ್ಣಿಸಲಿ !
ಶಬುದಗಳ ಮೀರಿ ಬರೆಹವನು ಮೀರಿ
ಪ್ರಾರ್ಥನೆಯ ವಿದ್ಯಾರ್ಥಿ ಸಿರಿ ಶೋಭೆಯನು ಹರಡಿದೆ
'ಕರ್ನಾಟಕರತ್ನ' ಶಿವಕುಮಾರರಾ ಅಂತರಂಗದ ಬೆಳಕ ಗಿಂಡಿ
॥ ಓ ಸಿದ್ಧಗಂಗೆ ॥

– ಡಾ. ಎಂ.ಜಿ. ನಾಗರಾಜ್

# ನೆನಪಿನ ಅಂಗಳದಿಂದ

- ಹೆಚ್. ಗಂಗಾಧರನ್ *

ಕರ್ನಾಟಕದ ತುಮಕೂರು ಜಿಲ್ಲೆ ಸಿದ್ಧಗಂಗಾ ಕ್ಷೇತ್ರ ಅತ್ಯಂತ ಪ್ರಾಚೀನವಾದ ಪುಣ್ಯಕ್ಷೇತ್ರ, ಧರ್ಮಕ್ಷೇತ್ರ, ಮಹಾನುಭಾವರಾದ ಗೋಸಲ ಸಿದ್ಧೇಶ್ವರರ ನೇತೃತ್ವದಲ್ಲಿ ಅನೇಕ ಜನ ಶರಣರು ತಪಸ್ಸು ಮಾಡಿದ ಪುಣ್ಯಕ್ಷೇತ್ರ, ಹೆಸರಾಂತ ತಪಸ್ವಿಗಳಾದ ಗುಬ್ಬಿಯ ಚೆನ್ನಬಸವೇಶ್ವರರು, ಕೊರಟಗೆರೆಯ ಶಂಕರದೇವರು, ಯಡಿಯೂರು ಸಿದ್ಧಲಿಂಗೇಶ್ವರರು, ಚಾಮರಾಜನಗರ ಜಿಲ್ಲೆ ಹರದನಹಳ್ಳಿಯ ನಿರಂಜನ ಪೀಠದ ಪೀಠಾಧಿಕಾರಿಗಳು, ಗೋಸಲ ಸಿದ್ಧೇಶ್ವರರ ಪರಂಪರೆಯವರು. ಈ ಕ್ಷೇತ್ರದ ಪುನರಾವತಾರಕ್ಕೆ ಕಾರಣರಾದವರು ಅಟವೀಶ್ವರರು, ಮಹಾಮಹಿಮರಾದ ಉದ್ದಾನ ಶಿವಯೋಗಿಗಳು. ಇವರ ಕರಕಮಲ ಸಂಜಾತರಾದ ತ್ರಿವಿಧ ದಾಸೋಹಿ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಇಂದಿನ ಪೀಠಾಧೀಶರು, ನೂರೊಂಬತ್ತು ವಸಂತಗಳನ್ನು ದಾಟಿದವರು.

ಅಟವೀಶ್ವರರು ಈ ಕ್ಷೇತ್ರದಲ್ಲಿ ಅನ್ನದಾನ, ಜ್ಞಾನದಾನದ ಕ್ರಿಯೆಗೆ ಪ್ರಚೋದಕರು. ಉದ್ದಾನೇಶ್ವರರು ಆ ಕ್ರಿಯೆಯನ್ನು ವಿಶಾಲಗೊಳಿಸಿ ಜನಪ್ರಿಯಗೊಳಿಸಿದ ಮಹಿಮರು. ಇಂತಹ ಮಹಿಮರ ಪರಂಪರೆಯಲ್ಲಿ ಬಂದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಾಧನೆ ಅವರ್ಣನೀಯ. ಅಂತಹ ಘಟನೆಗಳಲ್ಲಿ ಆಕಸ್ಮಿಕವಾಗಿ ನೆನಪಿಗೆ ಬಂದ ಕೆಲವು ಪ್ರಸಂಗಗಳನ್ನು ಓದುಗರ ಮುಂದಿಡಲು ಪ್ರಯತ್ನಿಸುತ್ತಿದ್ದೇನೆ. ೯೦ ಸಂವತ್ಸರಗಳನ್ನು ದಾಟಿದ ನನಗೆ ಮರೆವು ಆವರಿಸುತ್ತಾ ಬಂದಿದೆ. ಮರೆವು ಮರಣದ ಮುನ್ಸೂಚನೆಯೂ ಆಗಿರುತ್ತದೆ. ಇಂತಹ ಸಮಯದಲ್ಲೂ ನೆನಪಿನ ಪ್ರಸಂಗಗಳು ನೆನಪಿನಾಳದಿಂದ ಹೊರ ಬರಲು ಶ್ರೀಗಳವರೇ ಶಕ್ತಿಯನ್ನು ಕರುಣಿಸುವಂತೆ ಪ್ರಾರ್ಥಿಸುತ್ತೇನೆ.

ಐತಿಹಾಸಿಕವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರವು ವೀರಶೈವ ಸಂಪ್ರದಾಯದ ಪುಣ್ಯಕ್ಷೇತ್ರ, ಶರಣರಾದ ಮತ್ತು ಶರಣರಾಗ ಬಯಸುವ ವೀರಶೈವರಿಗೆ ಪ್ರೇರಕ ಕೇಂದ್ರವಾಗಿ ಬೆಳೆದುಬಂದದ್ದು ಐತಿಹಾಸಿಕ ಸತ್ಯ. ಆದುದರಿಂದ ಅಟವೀಶ್ವರರ ಮತ್ತು ಉದ್ದಾನೇಶ್ವರರ ಕಾರ್ಯಕ್ಷೇತ್ರ ವೀರಶೈವ ಧರ್ಮೋದ್ಧಾರಕ್ಕೆ ಕಾರಣವಾಗಿತ್ತು. ಆದ ಕಾರಣ ವೀರಶೈವ ಯುವಕರಿಗೆ ಅನ್ನದಾನ, ಜ್ಞಾನದಾನ ಮಾಡುವ ಸಂಸ್ಥೆಯಾಗಿ ಬೆಳೆಯಿತು. ಆದರೆ, ಗೋಸಲ ಸಿದ್ಧೇಶ್ವರರಿಂದ ಅವತರಿಸಿದ ಗಂಗಾ ಮಾತೆಯ ಕೃಪೆಗೆ ಜಾತಿ, ಮತ ಭೇದವಿಲದೆ ಸಾವಿರಾರು ಜನ ಪ್ರತಿವರ್ಷ ಸಿದ್ಧಲಿಂಗೇಶ್ವರರ ಮತ್ತು ಗಂಗಾದೇವಿಯ ಕೃಪೆಗೆ ಪಾತ್ರರಾಗುತ್ತಿದ್ದರು. ಸಂತಾನ ಭಾಗ್ಯ ಇಲ್ಲದವರಿಗೆ, ರೋಗದಿಂದ ನರಳುವವರಿಗೆ ಆರೋಗ್ಯ ಪ್ರಾಪ್ತಿ ಇವು ಗಂಗಾಮಾತೆಯ ಅನುಗ್ರಹದಿಂದ ಸಹಸ್ರಾರು ಜನಕ್ಕೆ ದೊರೆಯುತ್ತಾ ಬಂದಿದೆ. ಇನ್ನಿತರ ಕಷ್ಟ-ನಷ್ಟಗಳಿಗೆ ಇಲ್ಲಿ ತಪಸ್ಸನ್ನಾಚರಿಸಿದ ಯಡಿಯೂರು ಸಿದ್ಧಲಿಂಗೇಶ್ವರರ ಕೃಪೆಯಿಂದ ಪರಿಹಾರ ದೊರೆಯುತ್ತಾ ಬಂದಿದೆ. ಅದರಿಂದಾಗಿ ಸಹಸ್ರಾರು ಜನರು ತಮ್ಮ ಮಕ್ಕಳಿಗೆ ಸಿದ್ಧಗಂಗಪ್ಪ, ಸಿದ್ಧಗಂಗಮ್ಮ, ಸಿದ್ಧಲಿಂಗಪ್ಪ, ಸಿದ್ಧಲಿಂಗಮ್ಮ ಎಂದು ನಾಮಕರಣ ಮಾಡಿ ವಂಶ ಪಾರಂಪರ್ಯವಾಗಿ ಅನ್ಯಮತೀಯರೂ ಸಹ ಈ ಕ್ಷೇತ್ರವನ್ನು ತಮ್ಮ ಮನೆತನದ ಕ್ಷೇತ್ರವೆಂದು ಸೇವೆ ಸಲ್ಲಿಸುತ್ತಾ ಬಂದಿರುತ್ತಾರೆ. ಮೇಲೆ ಹೇಳಿದಂತೆ ಇದು ವೀರಶೈವ ಕ್ಷೇತ್ರವಾದರೂ ಅಟವೀಶ್ವರರ ಕಾಲದಿಂದ ದೇವರ ಸೇವೆಗೆ ಬರುವ ಪ್ರತಿಯೊಬ್ಬರಿಗೂ ಪ್ರಸಾದ ನೀಡುವ ದಾಸೋಹ ಕಾರ್ಯವನ್ನು ನಡೆಸಿಕೊಂಡು ಬರಲಾಗುತ್ತಿದೆ. ಇದು ಸಾಮಾನ್ಯವಾಗಿ ೧೯೦೦ನೇ ಇಸವಿಯಿಂದಲೂ ನಿರಂತರವಾಗಿ ನಡೆಯುತ್ತಾ ಬಂದಿದೆ. ಆ ಕಾಲದಲ್ಲಿ ಆರಂಭವಾಗಿ ಇತ್ತೀಚಿನವರೆಗೆ ಸಾರ್ವಜನಿಕವಾಗಿ ಅನ್ನದಾಸೋಹ ನಡೆಸುತ್ತಾ ಬಂದ ಮಠಗಳು ತುಮಕೂರು ಜಿಲ್ಲೆಯ ಇತಿಹಾಸದಲ್ಲಿ ಅಂತಹ ಯಾವ ಕ್ಷೇತ್ರವೂ ಇರಲಿಲ್ಲವೆಂದು ಐತಿಹಾಸಿಕ ಸಂಗತಿ.

ನಮ್ಮ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬರುವವರೆಗೆ ಪ್ರಾಚೀನವಾದ ಸಂಸ್ಕೃತ ಭಾಷೆಯನ್ನು ಬ್ರಾಹ್ಮಣೇತರರಿಗೆ ಬೋಧಿಸುವ ಸಂಸ್ಥೆಯಾಗಲಿ, ಅವಕಾಶವಾಗಲಿ ಇರಲಿಲ್ಲ. ಆದರೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸುಮಾರು ೧೯೪೦ರಲ್ಲಿ ಶ್ರೀ ಮಠದ ಕ್ರಿಯಾಶೀಲ ಪೀಠಾಧಿಪತಿಯಾದ ನಂತರ ವೀರಶೈವರಿಗೆ ಮಾತ್ರವಲ್ಲದೆ ಅನ್ಯಜಾತೀಯ

* ವಕೀಲರು ಹಾಗೂ ಮಾಜಿ ವಿಧಾನಸಭಾ ಸದಸ್ಯರು, ೧೦೮೯, ವಿಷ್ಣುವರ್ಧನ ರಸ್ತೆ, ಚಾಮರಾಜಪುರಂ, ಮೈಸೂರು-೫೭೦ ೦೦೫





ಮಕ್ಕಳಿಗೂ ಅನ್ನ, ವಸತಿ ಸೌಲಭ್ಯಗಳನ್ನು ಒದಗಿಸಿದರು. ಸಂಸ್ಕೃತ ವಿದ್ಯೆ ಕಲಿಸುವುದನ್ನು ಒದಗಿಸಿದರು. ಅದರ ಫಲವಾಗಿ ಬ್ರಾಹ್ಮಣೇತರರಲ್ಲೂ ಸಂಸ್ಕೃತ ವಿದ್ಯೆ ಕಲಿತು ಪಾಂಡಿತ್ಯ ಪಡೆದು ಅನೇಕರನ್ನು ಸ್ಮರಿಸಬಹುದು. ಕಲ್ಯಾಣದ ಶರಣರ ಕಾಲದ ನಂತರ ತಾವು ಮೇರು ವರ್ಗಕ್ಕೆ ಸೇರಿದವರೆಂಬ ಭಾವನೆ ತುಂಬಿದ್ದ ವೀರಶೈವ ಸಮಾಜ ಜಿಲ್ಲೆಯಲ್ಲಿತ್ತು. ಶರಣತತ್ತ್ವದ ಭವಿಭಕ್ತ ಎಂಬ ವಿಭಜನೆಯನ್ನು ಪೋಷಿಸುವ ಸಮಾಜವಿತ್ತು. ಅದಕ್ಕಾಗಿ ಭವಿಗಳೊಡನೆ ಭಕ್ತರು ಸಮರಸದಿಂದ ಇರುವುದನ್ನು ಒಪ್ಪದ ಮನೆತನಗಳೂ ಇದ್ದವು. ಅದನ್ನು ಶ್ರೀಗಳವರೊಡನೆ ನಿವೇದಿಸಿಕೊಂಡು ಶ್ರೀಮಠದ ಆಶ್ರಯಕ್ಕೆ ತಮ್ಮ ಮಕ್ಕಳನ್ನು ಸೇರಿಸಿದ ಮನೆತನಗಳೂ ಇದ್ದವು. ಶರಣ ತತ್ತ್ವವನ್ನು ಸಮಗ್ರವಾಗಿ ಅಡಕ ಮಾಡಿಕೊಂಡಿದ್ದ ಇಂದಿನ ಶ್ರೀಗಳವರು ಶರಣ ಸಮಾಜದ ಪುನರ್ ನಿರ್ಮಾಣ ಕಾರ್ಯದಲ್ಲಿ ಅನೇಕ ರೀತಿಯಿಂದ ಪ್ರಯತ್ನಶೀಲರಾಗಿದ್ದರು. ಅಂತಹ ಕಾರ್ಯಗಳಲ್ಲಿ ಅನ್ಯಮತೀಯರಿಗೂ ಸರ್ವತೋಮುಖ ಶಿಕ್ಷಣ ಕೊಡಬೇಕೆಂಬ ಆಶಯದಿಂದ ಅನ್ಯಮತೀಯರಿಗೂ ಅವಕಾಶ ಒದಗಿಸಿಕೊಟ್ಟರು.

ಆಗ ಆ ಕಾಲದಲ್ಲಿ ಶ್ರೀಮಠದ ವ್ಯವಹಾರಕ್ಕೆ ಸಾಕಷ್ಟು ಸಂಪತ್ತಿರಲಿಲ್ಲ. ಕಾಲು ನಡಿಗೆಯಲ್ಲಿ ಊರೂರಿಗೆ ಸಂಚರಿಸಿ ಜನರಿಂದ ಭಿಕ್ಷೆ ಪಡೆದು ದಾಸೋಹ ಮತ್ತು ಜ್ಞಾನದಾನದ ಕಾರ್ಯವನ್ನು ನಿರಂತರ ನಡೆಸುತ್ತಿದ್ದರು. ಆಗ ದಾಸೋಹ ಕಾರ್ಯಕ್ಕೆ ಇದ್ದ ಕುಟೀರಗಳು ಹೆಂಚಿನ ಮನೆಗಳು. ಆ ಸಮಯದಲ್ಲಿ ವೀರಶೈವ ಧರ್ಮಕ್ಕೆ ಚ್ಯುತಿ ಬಾರದಂತೆ, ವೀರಶೈವ ಯುವಕರು ಲಿಂಗಧಾರಣೆ ಮಾಡಿಕೊಂಡು ಲಿಂಗಕ್ಕೆ ನೈವೇದ್ಯ ಮಾಡಿ ಶರಣರ ವಚನಗಳನ್ನು ಒಬ್ಬರಾದ ಮೇಲೊಬ್ಬರು ಹೇಳುತ್ತಾ ತುತ್ತಿಗೂ ದರ್ಶನ ಮಾಡಿಸುತ್ತಿದ್ದರು. ವೀರಶೈವ ಯುವಕರು ಪ್ರಸಾದ ಸ್ವೀಕರಿಸುತ್ತಿದ್ದ ಕೋಣೆಯಿಂದ ಪಕ್ಕದ ಕೋಣೆಯಲ್ಲಿ ವೀರಶೈವೇತರರು ಕುಳಿತು ಪ್ರಸಾದ ಸ್ವೀಕರಿಸುತ್ತಿದ್ದರು. ಈ ಎರಡು ಕೋಣೆಗಳ ಮಧ್ಯೆ ಯುವಕರಿಗೂ, ವೀರಶೈವೇತರರಿಗೂ ಪ್ರಸಾದ ಬಡಿಸುತ್ತಿದ್ದರು. ಎಷ್ಟೋ ವೇಳೆ ವಿದ್ಯಾರ್ಥಿಗಳು ಕಾಲಕ್ಕೆ ಸರಿಯಾಗಿ ಶಾಲೆಗೆ ತೆರಳುವುದಕ್ಕಾಗಿ ಅಡಿಗೆಯವರ ಸಂಖ್ಯೆ ಕಡಿಮೆಯಾದಾಗ ತಾವೇ ರಾಗಿ ಮುದ್ದೆಯನ್ನು ಮಾಡಿ ತಮ್ಮ ಕೈಯಿಂದ ಬಡಿಸಿದ ಪ್ರಸಂಗಗಳು ನೆನಪಿದೆ. ಗಣೇಶನ ಹಬ್ಬ, ದೀಪಾವಳಿ ಮುಂತಾದ ಹಬ್ಬಗಳಲ್ಲಿ ಕಡುಬು, ಮಾಲದಿ ತಯಾರಿಸಿ, ವೀರಶೈವರಿಗೂ ವೀರಶೈವೇತರರಿಗೂ ಶ್ರೀಗಳವರೇ ನೇರವಾಗಿ ಬಡಿಸಿದ ಪ್ರಸಂಗಗಳಿವೆ. ಹೀಗೆ ಯಾವ ಜಾತಿ ಭೇದವೆಣಿಸದೆ ಶ್ರೀಮಠದಲ್ಲಿ ದಾಸೋಹ ನಡೆಯುತ್ತಾ ಬಂದಿದೆ. ಆ ಕಾಲದಲ್ಲಿ ಬರುವ ಯಾತ್ರಿಕರಿಗೆ ಯಾವ ಭೇದವಿಲ್ಲದೆ ಒಂದೇ ಸ್ಥಳದಲ್ಲಿ ಕೂಡಿಸಿ ಭೇದರಹಿತವಾಗಿ ಪ್ರಸಾದ ನೀಡುತ್ತಾ ಬಂದಿರುವುದು ಸತ್ಯಸಂಗತಿ. ಇದು ಬಹುಶಃ ಕರ್ನಾಟಕದಲ್ಲಿ ಮೊದಲ ಬಾರಿಗೆ ಇಂದಿನ ಮಠಾಧೀಶರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಹೃದಯ ವೈಶಾಲ್ಯತೆ, ಮಾನವೀಯತೆ ಚಿರಸ್ಮರಣೀಯ.

ಶ್ರೀಮಠದಲ್ಲಿ ೧೯೬೭ರ ಸಮಯದಲ್ಲಿ ಒಂದು ಬರಸಿಡಲು ಎರಗಿದಂತಹ ಘಟನೆ ನಡೆಯಿತು. ಶ್ರೀಮಠವು ರಾಜಕೀಯಕ್ಕೆ ಎಂದೂ ಪ್ರವೇಶ ಮಾಡಿರಲಿಲ್ಲ. ಶ್ರೀಮಠಕ್ಕೆ ರಾಜಕೀಯ ಪ್ರವೇಶ ಮಾಡಲು ಅವಕಾಶ ಕೊಟ್ಟಿರಲಿಲ್ಲ. ಆ ಸಮಯದಲ್ಲಿ ಚುನಾವಣೆ ನಡೆದು ಕೆಲವು ತಿಂಗಳ ನಂತರ ಮಕ್ಕಳು ಬೇರೆ ಬೇರೆ ಊಟಕ್ಕೆ ಕುಳಿತುಕೊಳ್ಳುವುದನ್ನು ದೊಡ್ಡ ಸಮಸ್ಯೆಯಾಗಿ ಮಾಡಿಕೊಂಡು ಜಾತೀಯತೆಯ ಗೊಂದಲವೆಬ್ಬಿಸಿ ಶ್ರೀಮಠದ ಘನತೆಗೆ ಕುಂದು ತರುವ, ಮಕ್ಕಳಿಗೆ ಭಯಾನಕ ಸ್ಥಿತಿಯನ್ನುಂಟು ಮಾಡುವ ದುರ್ಘಟನೆ ನಡೆಯಿತು. ಆ ಘಟನೆಯನ್ನು ವಿವರಿಸಿ ಕಹಿ ನೆನಪನ್ನು ಉಂಟು ಮಾಡುವುದು ಈ ಲೇಖನದ ಉದ್ದೇಶವಲ್ಲ. ಈ ಘಟನೆಯಿಂದ ಮಕ್ಕಳಿಗೆ ತೊಂದರೆಯುಂಟಾಗಿದೆಯೆಂದು ಒಂದು ತಿಂಗಳು ತಮ್ಮಗಳ ಊರಿಗೆ ಹೋಗಲು ವ್ಯವಸ್ಥೆ ಮಾಡಲಾಯಿತು.

ಈ ಬಗೆಗೆ ಶ್ರೀಗಳಿಗೆ ಸಾಂತ್ವಾನ ಹೇಳಲು ಸುತ್ತೂರು ಜಗದ್ಗುರು ಶ್ರೀ ರಾಜೇಂದ್ರ ಮಹಾಸ್ವಾಮಿಗಳು, ಕ್ಯಾತನಹಳ್ಳಿ ಮಠದ ಸ್ವಾಮಿಗಳು ಮತ್ತು ನಾನು ಘಟನೆ ನಡೆದ ಒಂದು ವಾರದ ನಂತರ ಶ್ರೀಮಠಕ್ಕೆ ಹೋಗಿದ್ದೆವು. ಆ ವಿಷಯದ ಬಗ್ಗೆ ಸ್ವಾಮೀಜಿಯವರು ಯಾರನ್ನೂ ದೂಷಿಸಲಿಲ್ಲ. ಯಾರ ಮೇಲೂ ಆಪಾದನೆ ಹೊರಿಸಲಿಲ್ಲ. ಪ್ರತ್ಯೇಕ್ಷದರ್ಶಿಗಳಾದ ಮಠದ ಅಭಿಮಾನಿಗಳು ನಡೆದ ಅಮಾನವೀಯ ಕೃತ್ಯಗಳನ್ನು ವಿವರಿಸಿದರು. ಆ ಸಮಯದಲ್ಲಿ ಮೈಸೂರಿನ ಯುವಕರು ತಂಡ ತಂಡವಾಗಿ ಶ್ರೀಮಠದ ರಕ್ಷಣೆಗೆ ಹೋಗಬೇಕೆಂದು ಆಲೋಚಿಸುತ್ತಿದ್ದರು. ಸುತ್ತೂರು ಶ್ರೀಗಳು ಅವರಿಗೆ ಆತುರ ಪಡಬಾರದೆಂದು ತಾವು ವಿಷಯ ತಿಳಿದುಬರುವುದಾಗಿ ಸಮಾಧಾನಪಡಿಸಿದರು. ವಿಷಯದ ಚರ್ಚೆ ದೀರ್ಘವಾಗಿ ನಡೆಯಿತಾದರೂ ಶ್ರೀಗಳು ತಮ್ಮ ಯಾವ ಅಭಿಪ್ರಾಯವನ್ನು ಕೊಡಲಿಲ್ಲ. ಮಠದಲ್ಲಿ ಯಾವ ವಿದ್ಯಾರ್ಥಿಗಳೂ ಇರಲಿಲ್ಲ. ಶ್ರೀಗಳವರು ದಿನನಿತ್ಯದಲ್ಲಿ ತಮ್ಮ ಲಿಂಗಪೂಜಾದಿ ಮುಗಿಸಿ ಹಳೇ ಮಠದಿಂದ ಕಛೇರಿವರೆಗೆ ನಿರ್ಭೀತರಾಗಿ ನಡೆದುಕೊಂಡು ಬರುತ್ತಿದ್ದರು. ನಮ್ಮ ಎಲ್ಲಾ ಮಾತುಕತೆಗಳು ಅಮೂಲ್ಯವಾದದೆಂಬುದನ್ನು ಪ್ರಸ್ತಾಪಿಸುವುದಕ್ಕಾಗಿ ಈ

ಲೇಖನ ಬರೆಯಲಾಗಿದೆ. ತಪ್ಪಾಗಿ ತಿಳಿದುಕೊಂಡ ಯಾರದೋ ಕಾರ್ಯದಿಂದ ಬಡಮಕ್ಕಳು ವಿದ್ಯೆಯಿಂದ ವಂಚಿತರಾಗುತ್ತಾರಲ್ಲಾ ಎಂಬ ಚಿಂತೆ ಕಾಡುತ್ತದೆ ಎಂದರು. ನಾವು ಹೊರಟಾಗ ಮಠದಲ್ಲಿ ಮಕ್ಕಳಿಲ್ಲದಿದ್ದರೆ ಎಂತಹ ಜೀವನ ಎನ್ನುವಾಗ ಶ್ರೀಗಳವರ ಕಂಠ ಗದ್ಗದಿತವಾಗಿತ್ತು. ಅವರ ಕಣ್ಣಿನಲ್ಲಿ ನೀರು ತುಂಬಿರಬಹುದು. ಆ ಮಾತು ಕೇಳಿದಾಗ ನನ್ನ ಕಣ್ಣಿನಿಂದ ನೀರು ಬರುವುದನ್ನು ತಡೆಯಲಾಗಲಿಲ್ಲ. ಸುತ್ತೂರು ಶ್ರೀಗಳವರು ಸೇರಿದಂತೆ ಕೆಲವು ನಿಮಿಷ ಅಲ್ಲಿ ಮೌನ ಆವರಿಸಿತ್ತು. ಶ್ರೀಗಳವರ ಮನೋಧರ್ಮ ಬಡಮಕ್ಕಳೇ ದೈವ ಸಂತಾನವೆಂಬ ಭಾವನೆ. ಅವರ ಮನ ತುಂಬಿದೆ ಎಂಬುದು ವ್ಯಕ್ತವಾಗುತ್ತಿತ್ತು. ಕೆಲವು ಕಾಲದ ನಂತರ ಎಲ್ಲವೂ ಶಾಂತವಾಗಿ ವಿದ್ಯಾರ್ಥಿಗಳು ಮಠಕ್ಕೆ ಸೇರಿ ಮಠದ ಕಾರ್ಯ ಎಂದಿನಂತೆ ಮುಂದುವರಿಯಿತು. ರಾಜಕೀಯ ಕಾರಣಕ್ಕಾಗಿ ಯಾರು ಈ ದುರ್ಘಟನೆಗೆ ಕಾರಣರಾದರೋ ಅವರು ರಾಜಕೀಯ ಕ್ಷೇತ್ರದಲ್ಲೇ ಹೇಳ ಹೆಸರಿಲ್ಲದಂತಾದರು. ಇದು ಕ್ಷೇತ್ರದ ಮಹಿಮೆ ಎಂಬುದು ನಾವು ನೆನಪಿಡಬೇಕಾದ ಸಂಗತಿ.

* * *

## ಶ್ರೀವಾಣಿ

ಒಂದೂರಿನಲ್ಲಿ ಒಬ್ಬ ವರ್ತಕನಿದ್ದ. ಅವನೊಬ್ಬ ಮಹಾಕಪಟ ಶಿವಭಕ್ತ. ಅಳೆಯುವಾಗ, ತೂಕ ಮಾಡುವಾಗ, ಯಾವಾಗಲೂ 'ಶಿವ ಶಿವ' ಎನ್ನುತ್ತಿದ್ದ. ಬಾಯಲ್ಲಿ ಶಿವಮಂತ್ರೋಚ್ಚಾರಣೆ; ಕೈಯಲ್ಲಿ ಮಹಾಮೋಸದಾಚರಣೆ. ಪಂಚೇರಿಗೆ ಸೇರೇ ಇಲ್ಲ; ಮಣಕ್ಕೆ ಪಂಚೇರೇ ಇಲ್ಲ. ಇವನ ಮೋಸ ಕಂಡು ಆ ಊರಿನ ಒಬ್ಬಾತ 'ಸರಿಯಾಗಿ ಬುದಿ ಕಲಿಸಬೇಕು' ಎಂದು ಕೊಂಡ. ಒಂದು ದಿವಸ ಧೈರ್ಯಮಾಡಿ ಕೇಳಿಯೇ ಬಿಟ್ಟ; ''ಏನು ಶೆಟ್ಟರೇ ! ಇಷ್ಟೊಂದು ಅಳತೆ ಕಡಿಮೆ ಇದೆಯಲ್ಲಾ?'' ''ಅಯ್ಯೋ ! ಶಿವ ಶಿವಾ ! ಕೊಟ್ಟವನೂ ಶಿವನೇ ತೆಗೆದುಕೊಂಡವನೂ ಶಿವನೆ. ಕಮ್ಮಿ ಕೊಟ್ಟವರಾರು? ತೆಗೆದುಕೊಂಡವರಾರು?'' ಶೆಟ್ಟಿ ವಿನಯದಿಂದ ನುಡಿದ. ಆಗ ಆ ಮನುಷ್ಯ ರೇಗಿ ಕಪಾಳ ಸೇವೆಯನ್ನು ಮಾಡಿ ಹೇಳಿದ; ಕಪಾಳಕ್ಕೆ ಹೊಡೆದವನೂ ಶಿವನೆ; ಹೊಡೆಸಿಕೊಂಡವನೂ ಶಿವನೆ''. ಬಾಯಲ್ಲೊಂದು ಆಡಿ ಕೈಯಲ್ಲೊಂದು ಮಾಡಿದರೆ ಹೀಗೆ ಆಗುವುದು.

# ಶ್ರೀ ಶಿವಕುಮಾರ ವರ ಗುರುವೆ



ಶ್ರೀ ಶಿವಕುಮಾರ ವರ ಗುರುವೆ
ಭವದ ಭಯದ ನೀ ಕಳೆವೆ
ಧರೆಯೊಳಗೆ ಹರಳೂರಪ್ಪ ತಾನಾಗಿ
ಹರಸುತಿಹ ಗುರುವೆ ನಮಿಪೆನು. ॥ ೧ ॥

ಶರಣ ಕುಲಕೆ ಚಂದಿರನಂತೆ ಬೆಳಗಿರಲು
ನೀ ಕರುಣೆಯ ಕಡಲು ಅಮ್ಮನ ಮಡಿಲು
ದುರಿತವ ಕಳೆದು ಸುಗುಣವ ಸುರಿದು
ಉದ್ಧರಿಸುತಿಹ ಗುರುವೆ ನಮಿಪೆನು ॥ ೨ ॥

ಸದ್ಧರ್ಮ ಪೊರೆದು ಬುದ್ಧನಾಗಿ ಬೆಳೆದು
ಉದ್ದಾನ ಶ್ರೀ ಗುರು ಪುತ್ರನಾಗಿ ಹೊಳೆದು
ಪತಿತರನ್ನುದ್ಧರಿಸಿ ಚೈತನ್ಯ ತುಂಬಿಹ
ಶರಣ ಕುಲೋತ್ತುಂಗ ನೀ ಹರಸು. ॥ ೩ ॥

ತನುವ ತಪದಿ ದಂಡಿಸುತ ನಿತ್ಯ
ಪಾವನಗೊಳಿಸಿಹೆ ನೂರೊಂಭತ್ತುವಸಂತ ಸತ್ಯ
ಭೋಗ ಭಾಗ್ಯವಳಿದು ಯೋಗಮಾರ್ಗದಿ ನಡೆದು
ತ್ಯಾಗಮೂರುತಿಯೆ ನಿತ್ಯ ನೀ ಹರಸು.॥ ೪ ॥

ಕೋಪ ತಾಪವನು ಸಮತೆಯಲಿ ಕಂಡು
ಉರಿ ಸಿರಿಯನು ಮೌನದೊಳೊಡಲಿಟ್ಟು
ಪಾಮರರ ತಿದ್ದಿ ಪಂಡಿತರಗೈವ ಗುರುವಾದ
ಕರವನಿಡಿದು ಕರುಣದಿಂ ಉದ್ದರಿಸು
ಅನವರತ.
॥ ೫ ॥

– ವಿದ್ವಾನ್ ಹರಳೂರು ಶಿವಕುಮಾರ್
ಶ್ರೀ ಶಿವಕುಮಾರ ನಿಲಯ, ಹರಳೂರು
ಹರಳೂರು ಅಂಚೆ, ತುಮಕೂರು ತಾ॥







# ಶ್ರೀ ಸಿದ್ಧಗಂಗಾ ಮಠದಲ್ಲಿ ಅರಳಿದ ಸರ್ವಜನಾಂಗದ ಸುಂದರ ಪುಷ್ಪಗಳು

– ಎಚ್.ಎಸ್. ಸಿದ್ಧಗಂಗಪ್ಪ *

**ಒಂ**ದು ಮಠದ ಪೀಠಾಧ್ಯಕ್ಷರಾಗಿ ೮೭ ವರ್ಷಗಳು ನಿರಂತರವಾಗಿ ಲೋಕ ಕಲ್ಯಾಣಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡವರು ಈ ಜಗತ್ತಿನ ಧಾರ್ಮಿಕ ಪರಂಪರೆಯ ಇತಿಹಾಸದಲ್ಲಿ ನನಗೆ ತಿಳಿಸಿದಂತೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಬಿಟ್ಟರೆ ಯಾರೂ ಇಲ್ಲ. ತಮ್ಮ ಆರಾಧ್ಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳವರು ಹಾಕಿಕೊಟ್ಟ ಅಡಿಪಾಯದ ಮೇಲೆ ಸುಭದ್ರವಾದ ಕಟ್ಟಡಗಳನ್ನು ಕಟ್ಟುವುದರ ಮೂಲಕ ತಮ್ಮ ಗುರುಗಳ ಆಶಯವನ್ನು ಸಾಕಾರಗೊಳಿಸಿದ ಪುಣ್ಯಚೇತನ.

ಶ್ರೀ ಉದ್ದಾನ ಶಿವಯೋಗಿಗಳವರು ಸದಾ ಆಧ್ಯಾತ್ಮ ಚಿಂತನೆ ಜೊತೆಗೆ ಸದಾ ಲೋಕ ಕಲ್ಯಾಣದ ಬಗ್ಗೆ ಚಿಂತನೆಯನ್ನು ಮಾಡುತ್ತಿದ್ದರು. ದೀನ-ದಲಿತ, ಬಡವರ ಬದುಕಿನಲ್ಲಿ ಬೆಳಕು ಕಾಣಬೇಕಾದರೆ, ಭವಿಷ್ಯ ಉತ್ತಮವಾದ ರೀತಿಯಲ್ಲಿ ರೂಪುಗೊಳ್ಳಬೇಕಾದರೆ ಅಕ್ಷರಜ್ಞಾನ ತುಂಬಾ ಅವಶ್ಯಕ ಹಾಗೂ ಮಹತ್ವವಾದದ್ದು ಎಂಬುದನ್ನು ಅರಿತ ಶಿವಯೋಗಿಗಳು ಗ್ರಾಮೀಣ ವಿದ್ಯಾರ್ಥಿಗಳ ಭವಿಷ್ಯದ ಹಿತದೃಷ್ಟಿಯಿಂದ ಒಂದು ನೂರು ವರ್ಷಗಳ ಹಿಂದೆ (೧೯೧೭) ಸಾರ್ವಜನಿಕ ಉಚಿತ ವಸತಿ ಪ್ರಸಾದ ನಿಲಯವನ್ನು ಪ್ರಾರಂಭಿಸಿದರು. ಆ ಕಾಲದಲ್ಲಿಯೆ ಸರ್ಕಾರವೇ ಸಾರ್ವಜನಿಕ ವಿದ್ಯಾರ್ಥಿ ನಿಲಯಗಳನ್ನು ತೆರೆಯಲು ಹೆದರಿ ಜಾತಿವಾರು ವಿದ್ಯಾರ್ಥಿ ನಿಲಯಗಳನ್ನು ತೆರೆಯುತ್ತಿತ್ತು. ಸಂಸ್ಕೃತ ಭಾಷೆಯ ಶಿಕ್ಷಣ ಉನ್ನತ ವರ್ಗದವರಿಗಷ್ಟೇ ಸೀಮಿತವಲ್ಲ, ಎಲ್ಲ ವರ್ಗದವರೂ ಅಧ್ಯಯನ ಮಾಡಬಹುದೆಂಬ ಸತ್ಸಂಪ್ರದಾಯವನ್ನು ಹಾಕಿ ಕೊಟ್ಟವರು ಬಹುಶಃ ಇಡೀ ದೇಶದಲ್ಲೇ ಶ್ರೀ ಉದ್ದಾನ ಶಿವಯೋಗಿಗಳೇ ಮೊದಲಿಗರು. ಶ್ರೀ ಶಿವಯೋಗಿಗಳು ತಮ್ಮ ವೈಚಾರಿಕತೆ, ಬಡವರ ಮೇಲಿನ ಕಾಳಜಿ, ಕಳಕಳಿ, ವಿಶಾಲದೃಷ್ಟಿ, ಮಾನವೀಯತೆ, ಹೃದಯ ವೈಶಾಲ್ಯತೆ, ಅಂತಃಕರುಣೆ ಇವುಗಳ ಮಹಾಸಂಗಮವಾಗಿದ್ದರು. ಶ್ರೀಕ್ಷೇತ್ರವನ್ನು ಸರ್ವಧರ್ಮ ಸಮನ್ವಯತೆಯ ಸಾಕಾರ ಕೇಂದ್ರವನ್ನಾಗಿ ಮಾಡಲು ಬೀಜವನ್ನು ನೆಟ್ಟ ಮಹಾಮಹಿಮರು.

ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿಯೇ ಅನೇಕ ಸವಾಲುಗಳನ್ನು, ಸಮಸ್ಯೆಗಳನ್ನು ತಮ್ಮ ಆತ್ಮಶಕ್ತಿಯಿಂದ ದಿಟ್ಟತನದಿಂದ ಶ್ರೀಮಠದ ಸತ್‌ಸಂಪ್ರದಾಯಗಳಿಗೆ ಕಿಂಚಿತ್ತೂ ಲೋಪವಾಗದಂತೆ ಅಭಿವೃದ್ಧಿ ಪಥದಲ್ಲಿ ಮುನ್ನಡೆಸಿಕೊಂಡು ಬಂದಿದ್ದಾರೆ. ಶ್ರೀ ಉದ್ದಾನ ಶಿವಯೋಗಿಗಳ ಕಾಲದಲ್ಲಿ ಎಂಭತ್ತರಷ್ಟಿದ್ದ ವಿದ್ಯಾರ್ಥಿಗಳ ಸಂಖ್ಯೆ ಪೂಜ್ಯ ಶ್ರೀಗಳವರ ಕಾಲದಲ್ಲಿ ಹತ್ತು ಸಾವಿರಕ್ಕೂ ಮೀರಿದೆ ಎಂದರೆ ಈ ಸಾಧನೆಯ ಹಿಂದೆ ಪೂಜ್ಯ ಶ್ರೀಗಳವರ ಸಮಾಜದ ಬಗೆಗಿನ ಕಳಕಳಿ ಪ್ರಾಮಾಣಿಕ ಕಾಯಕ ನಿಷ್ಠೆ, ಪರಿಶ್ರಮ, ನಿಸ್ವಾರ್ಥ, ಜೀವಕಾರುಣ್ಯ ಅಪರಿಮಿತವಾದುದು.

ಪೂಜ್ಯ ಶ್ರೀಗಳು ಶ್ರೀಮಠದಲ್ಲಿ ಸರ್ವಜನಾಂಗದ ಸುಂದರ ತೋಟವನ್ನಾಗಿ ಮಾಡಲು ಅವರು ಪಟ್ಟ ಕಷ್ಟ, ಎದುರಿಸಿದ ಸಮಸ್ಯೆಗಳು ಒಂದೇ, ಎರಡೇ ! ನೂರಾರು. ಪಾಳು ಬಿದ್ದ ಭೂಮಿಯಲ್ಲಿ ಅಗೆದು, ಸಮಮಾಡಿ, ನೂರಾರು ಜಾತಿಯ ಗಿಡಗಳನ್ನು ನೆಟ್ಟು, ಕಾಲಕಾಲಕ್ಕೆ ಗೊಬ್ಬರ, ನೀರು ಹಾಕಿ, ಒಂದೊಂದು ಗಿಡದ ಕಡೆಗೂ ಗಮನಕೊಟ್ಟು ನಳನಳಿಸುವಂತೆ ಮಾಡುವಲ್ಲಿ ಪೂಜ್ಯ ಶ್ರೀಗಳವರು ಸಫಲರಾಗಿದ್ದಾರೆ. ಕಷ್ಟಪಟ್ಟು ಬೆಳೆಸಿದ ಒಂದೊಂದು ಸಸಿಯ ಬಗ್ಗೆಯೂ ಕಾಳಜಿಯಿದೆ, ಕಳಕಳಿಯಿದೆ, ಯಾವ ಗಿಡವೂ ಆರೈಕೆಯಿಲ್ಲದೆ ಸೊರಗಬಾರದೆಂದು ತುಂಬಾ ಎಚ್ಚರ ವಹಿಸುತ್ತಾ ಬಂದಿದ್ದಾರೆ. ಕಷ್ಟಗಳ ಮಧ್ಯೆಯೂ ಕಷ್ಟಪಟ್ಟು ಸುಂದರವಾದ ಹೂವುಗಳನ್ನು ಬಿಡುವ ವಿವಿಧ ಜಾತಿಯ ಗಿಡಗಳನ್ನು ಬೆಳೆಸಿದ್ದಾರೆ. ಈ ಸುಂದರವಾದ ತೋಟದಲ್ಲಿರುವ ಎಲ್ಲಾ ಹೂವಿನ ಗಿಡಗಳನ್ನು ಸಮಾನತೆಯಿಂದ ಆರೈಕೆ ಮಾಡುತ್ತಿದ್ದಾರೆ. ಈ ತೋಟದಲ್ಲಿ ಬೆಳೆಸಿದ ಗಿಡಗಳ ಹೆಸರುಗಳನ್ನು ಕೇಳಿದಾಗ ಆಶ್ಚರ್ಯವಾಗುತ್ತದೆ. ಒಂದೊಂದು ಗಿಡವೂ ಒಂದೊಂದು ಜಾತಿಯನ್ನು ಸಾಂಕೇತಿಸುತ್ತದೆ.

ಲಿಂಗಾಯಿತ, ಒಕ್ಕಲಿಗ, ಬ್ರಾಹ್ಮಣ, ಜೈನ, ವೈಷ್ಣವ, ವೈಶ್ಯ, ಮೊದಲಿಯಾರ್, ಕ್ರಿಶ್ಚಿಯನ್, ಮರಾಠ, ಹಳ್ಳಿಕಾರ ಒಕ್ಕಲಿಗ, ರೆಡ್ಡಿ, ಕುಂಚಿಟಿಗ, ಗೌಡ, ಕಾಪು, ಕಮ್ಮ, ಕೊಡವ, ಬಲಿಜ, ಬಣಜಿಗ, ನಾಯ್ಡು, ತೆಲುಗು ಗೌಡ, ಮುಸ್ಲಿಂ, ಹೆಳವ, ಬೆಸ್ತ, ಅಂಬಿಗ, ಬರ್ಕಿ, ಗಂಗಾಮತ, ಜಲಗಾರ, ಕಬ್ಬಲಿಗ, ಕಬ್ಬೇರಾ, ಬುಡುಬುಡಿಕೆ, ಲಾಡರು, ಚಿತ್ತಗಾರ, ಉಪ್ಪಾರ, ವಾಸುದೇವ, ಗೊಂದಲಿ, ಬೇಡರು, ಗೊಲ್ಲ, ತಳವಾರ, ವಾಲ್ಮೀಕಿ,

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧

ವಡ್ಡರು, ಯಾದವ, ಅಗಸ, ಈಡಿಗ, ನಾಮಧಾರಿ, ಕುಂಬಾರ, ಕುರುಬ, ನಾಯಿಂದ, ಕ್ಷೌರಿಕ, ತಿಗಳ, ವಹ್ನಿಕುಲ, ವಿಶ್ವಕರ್ಮ, ಅಕ್ಕಸಾಲಿಗ, ಕಮ್ಮಾರ, ಪಾಂಚಾಲ, ಹೂಗಾರ, ಮಾಲಗಾರ, ಹಂಡೆವಜೀರ, ಪೂಲಾರಿ, ಜೀರಾ, ಭಾವಸಾರ ಕ್ಷತ್ರಿಯ, ಹಟಗಾರ, ದೇವಾಂಗ, ಕುರುಹಿನಶೆಟ್ಟಿ, ಬಿಲಿಮೊಗ್ಗ, ತೊಗಟ, ಪದ್ಮಶಾಲಿ, ನೇಕಾರ, ಸೋಮವಂಶ ಕ್ಷತ್ರಿಯ, ರಜಪೂತ, ಗಾಣಿಗ, ಸಾದರು, ಜಟ್ಟೀ, ಬಡಿಗೇರ, ಆದಿದ್ರಾವಿಡ, ಆದಿಕರ್ನಾಟಕ, ಲಂಬಾಣಿ–ಬೇಡ ಜನಾಂಗ, ಸಮಗಾರ, ಮೋಚಿ, ಮೇದ, ಭೋವಿ, ಚಲುವಾದಿ, ದೊಂಬರ, ಹಂದಿಜೋಗಿ, ಕೊರಚ, ಕೊರಮ, ಮಾದಿಗ, ಮಾಲಗಾರ, ಮುಲಸನ್ಯಾಸಿ, ಶಿಳ್ಳೇಕ್ಯಾತ, ತೋಟಿ, ಸುಡುಗಾಡು ಸಿದ್ಧ, ಚೌದರಿ, ಗೊಂಡ, ಕಾಣಿಯಾರ, ತೊಕರಿಕೊಲಿ, ನಾಯಕ ಇತ್ಯಾದಿ ಹೆಸರಿನ ಗಿಡಗಳಿವೆ. ಈ ಎಲ್ಲಾ ಗಿಡಗಳಲ್ಲಿ ಅರಳಿರುವ ಹೂವುಗಳ ಸೌಂದರ್ಯವನ್ನು ಆಸ್ವಾದಿಸಬೇಕಾದರೆ, ಕಣ್ಮನಗಳನ್ನು ತುಂಬಿಸಿ ಕೊಳ್ಳಬೇಕಾದರೆ ಶ್ರೀಮಠದಲ್ಲಿ ಪ್ರತಿನಿತ್ಯ ಸಂಜೆ ನಡೆಯುವ ಸಾಮೂಹಿಕ ಪ್ರಾರ್ಥನೆಯನ್ನು ನೋಡಬೇಕು. ಈ ಮೇಲೆ ಹೇಳಿದ ಎಲ್ಲಾ ತಳಿಯ ಹೂಗಳ ಪ್ರತಿ ರೂಪದಂತಿರುವ ವಿದ್ಯಾರ್ಥಿಗಳಿಗೆ ಭಕ್ತಿಯಿದೆ, ಕೃತಜ್ಞತೆಯಿದೆ, ಸಂಸ್ಕಾರವಿದೆ, ಸಂಸ್ಕೃತಿಯಿದೆ, ವಿವಿಧತೆಯಲ್ಲಿ ಏಕತೆಯನ್ನು ಕಾಣುವ ಹೃದಯ ವೈಶಾಲ್ಯತೆಯಿದೆ, ಪರಸ್ಪರ ಸೋದರ ಭಾವವಿದೆ. ಪೂಜ್ಯರ ದಿವ್ಯಸಾನ್ನಿಧ್ಯದಲ್ಲಿ ಪ್ರಾರ್ಥನೆ ಮಾಡುವ ದೃಶ್ಯ ಮನಮೋಹಕ. ಇಲ್ಲಿ ಸೇರಿರುವ ಹೂವುಗಳನ್ನು ಈ ಹೂವು ಇಂಥ ಜಾತಿಯದು ಎಂದು ವರ್ಗೀಕರಣ ಮಾಡಲು ಕಷ್ಟವಾಗುತ್ತದೆ. ಇಲ್ಲಿ ಹೆಸರಿಸಿರುವ ಎಷ್ಟೋ ಗಿಡಗಳ ಹೆಸರುಗಳು ನಮಗೆ ಗೊತ್ತಿಲ್ಲ. ಅಂಥಹ ಅಪರೂಪದ ತಳಿಯ ಗಿಡಗಳನ್ನು ಪೂಜ್ಯ ಶ್ರೀಗಳವರು ತಾವು ಬೆಳೆದು ಸಮಾಜಕ್ಕೆ ಸಮರ್ಪಿಸಿದ್ದಾರೆ. ರಾಷ್ಟ್ರದ ರಾಜಕೀಯ ಮುತ್ಸದ್ಧಿ, ರಾಜ್ಯದ ಮಾಜಿ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪನವರು ಈ ಸುಂದರವಾದ ಹೂವಿನ ತೋಟದಲ್ಲಿ ಬೆಳೆದಿರುವ ಚೈತನ್ಯದಿಂದ ಕಂಗೊಳಿಸುವ ಮನಕ್ಕೆ ಮುದ ನೀಡುವ ಪುಷ್ಪಗಳನ್ನು ನೋಡಿ ಸೋಜಿಗವನ್ನು ವ್ಯಕ್ತಪಡಿಸಿ ತನ್ನ ಜೀವಮಾನದಲ್ಲಿ ಇಂಥಹ ಸುಂದರವಾದ ಸನ್ನಿವೇಶವನ್ನು ನೋಡಿಲ್ಲ ಎಂದು ಹೇಳಿರುವುದು ಔಚಿತ್ಯ ಪೂರ್ಣವಾಗಿದೆ. ಈ ದೃಷ್ಟಿಯಿಂದಲೇ ಸರ್ವಧರ್ಮ ಸಮನ್ವಯಕ್ಕೆ ಮತ್ತೊಂದು ಹೆಸರು ಶ್ರೀ ಸಿದ್ಧಗಂಗಾ ಕ್ಷೇತ್ರ ಎಂಬ ಮಾತು ಲೋಕ ವಿಖ್ಯಾತವಾಗಿರುವುದು.

ಶ್ರೀ ಸಿದ್ಧಗಂಗಾ ವೀರಶೈವ ಮಠವಾದರೂ ಸಮಾಜದಲ್ಲಿನ ಎಲ್ಲ ಜನಾಂಗದವರಿಗೂ ಆಶ್ರಯ ನೀಡಿ ಸರ್ವಧರ್ಮ ಸಮನ್ವಯದ ಮಠವನ್ನಾಗಿಸುವುದರ ಮೂಲಕ ಮೇಲ್ಪಂಕ್ತಿಯನ್ನು ಹಾಕಿಕೊಟ್ಟು ಮಹಾಮಾನವತಾವಾದಿಯಾಗಿದ್ದಾರೆ. **'ಮನುಷ್ಯ ಜಾತಿ ತಾನೊಂದೆ ವಲಂ'** ಎಂಬ ಕವಿವಾಣಿಯನ್ನು ಸಾಕಾರಗೊಳಿಸಿದ್ದಾರೆ.

ಪರಮಪೂಜ್ಯ ಶ್ರೀಗಳವರು ಆಜನ್ಮ ಬ್ರಹ್ಮಚಾರಿಯಾದರೂ ವಿಶ್ವ ಸಂಸಾರಿ. ವಿಶ್ವವೇ ಅವರ ಕುಟುಂಬ. ಸಹಸ್ರ ಸಹಸ್ರ ದೀನ ದಲಿತ, ಬಡ ಮಕ್ಕಳ ಪಾಲಿಗೆ ಮಮತೆಯ ತಾಯಿಯಾಗಿ, ಪ್ರೀತಿ, ವಾತ್ಸಲ್ಯವನ್ನು ಧಾರೆ ಎರೆಯುವ ಕಾರುಣ್ಯ ಮೂರ್ತಿಯಾಗಿ, ಮಕ್ಕಳ ಪಾಲನೆಗೆ ಅಗತ್ಯವಾದ ಸವಲತ್ತುಗಳನ್ನು, ಒಂದಿಷ್ಟು ದಣಿವರಿಯದೆ ಪೂರೈಸುವ ತಂದೆಯಾಗಿ, ಮಕ್ಕಳಲ್ಲಿನ ಅಂಧಕಾರವನ್ನು ಕಳೆದು ಸುಜ್ಞಾನದ ಜ್ಯೋತಿಯನ್ನು ಬೆಳಗಿಸುವ ಗುರುವಾಗಿ, ಮಾರ್ಗದರ್ಶಕರಾಗಿ ಅವರೆಲ್ಲರ ಭವಿಷ್ಯವನ್ನು ರೂಪಿಸುತ್ತಾ ಸುಸಂಸ್ಕೃತರಾಗಲು ಎಲ್ಲಾ ರೀತಿಯ ಮಾರ್ಗದರ್ಶನ ಮಾಡುತ್ತಾ ಬಂದಿದ್ದಾರೆ.

**"ಜಗವೆಲ್ಲ ಮಲಗಿರಲು ಅವನೊಬ್ಬ ಎದ್ದ"** ಬುದ್ಧನ ಬಗ್ಗೆ ಆಡಿರುವ ಈ ಕವಿನುಡಿಗಳು ಪೂಜ್ಯರಿಗೆ ಸಂಪೂರ್ಣವಾಗಿ ಅನ್ವಯವಾಗುತ್ತದೆ. ಇಡೀ ಜಗತ್ತೇ ನಿಶ್ಚಿಂತೆಯಿಂದ ನಿದ್ರಾದೇವಿಗೆ ಶರಣಾಗಿರುವಾಗ ಇವರು ಜಾಗೃತರಾಗಿದ್ದು ಲೋಕಕಲ್ಯಾಣದ ಬಗ್ಗೆ ಚಿಂತನೆ ಮಾಡುತ್ತಿರುತ್ತಾರೆ. ಅವರ ದಿನಚರಿಯೇ ಒಂದು ಅದ್ಭುತವೆನಿಸುತ್ತದೆ. ದಿನದ ೨೪ ಗಂಟೆಗಳಲ್ಲಿ ೨೧ ಗಂಟೆಗಳನ್ನು ಲೋಕಕಲ್ಯಾಣಕ್ಕಾಗಿ ತಮ್ಮ ಬದುಕನ್ನು ಸಮರ್ಪಿಸಿಕೊಂಡಿದ್ದಾರೆ. ಒಂದೊಂದು ನಿಮಿಷವನ್ನು ಸಾರ್ಥಕವಾಗುವ ರೀತಿಯಲ್ಲಿ ದುಡಿಸಿಕೊಳ್ಳುತ್ತಿದ್ದಾರೆ. ಕಾಲವೇ ಇವರಿಗೆ ಶರಣಾಗಿದೆ.

'ಸೇವೆ' ಎಂಬ ಪದಕ್ಕೆ ಅರ್ಥಪೂರ್ಣವಾದ ವ್ಯಾಖ್ಯಾನ ಬರೆದವರು ಪರಮಪೂಜ್ಯ ಶ್ರೀಗಳವರು. 'ಸೇವೆ'ಗೆ ಪ್ರತಿರೂಪದಂತಿರುವ ಪೂಜ್ಯ ಶ್ರೀಗಳು ತಮ್ಮ ನಿಷ್ಕಾಮ ನಡೆ ನುಡಿಯಿಂದ ಮಠಾಧೀಶರುಗಳಿಗೆ ಆದರ್ಶವಾಗಿದ್ದಾರೆ. ಇಡೀ ವಿಶ್ವವೇ ಬೆಕ್ಕಸ ಬೆರಗಾಗುವಂತ ಸಾಧನೆ ಮಾಡಿದ್ದರೂ ತಾವು ಮಾಡಿದೆ ಎಂಬ ಭಾವನೆ ಸುಳಿಯಲು ಬಿಡಲಿಲ್ಲ.

***ಮಾಡಿದೆನೆಂಬುದು ಮನದಲ್ಲಿ ಹೊಳೆದರೆ***
***ಏಡಿಸಿಕಾಡಿತ್ತು ಶಿವನ ಡಂಗುರ***
***ಮಾಡಿದೆನೆನ್ನದಿರಾ ಲಿಂಗಕ್ಕೆ ಮಾಡಿದೆನ್ನೆದಿರಾ ಜಂಗಮಕ್ಕೆ***
***ಮಾಡಿದೆನೆಂಬುದು ಮನದಲಿಲ್ಲದಿದ್ದರೆ***
***ಬೇಡಿತ್ತನೀವನು ಕೂಡಲ ಸಂಗಮದೇವ.***

ಬಸವಣ್ಣನವರ ಈ ವಚನದ ಆಶಯವನ್ನು ಪೂಜ್ಯರು ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ. ಬಸವಣ್ಣನವರು ಹೇಳಿದಂತೆ ಮಾಡಿದೆನೆಂಬುದು ಮನದಲ್ಲಿ ಇಲ್ಲದಿದ್ದರೆ ಬೇಡಿದ್ದನ್ನು ಶಿವನು ಕೊಡುತ್ತಾನೆ. ನಿಸ್ವಾರ್ಥದಿಂದ, ನಿಷ್ಕಲ್ಮಷ ಭಾವದಿಂದ ಪೂಜ್ಯ ಶ್ರೀಗಳವರು ದಾಸೋಹ ಸೇವೆ ಮಾಡುತ್ತಿರುವುದರಿಂದಲೇ ಶ್ರೀಮಠದ ಉಗ್ರಾಣ ಕಾಮಧೇನು, ಕಲ್ಪವೃಕ್ಷವಾಗಿರುವುದು. ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಅಂತಃಕರಣ ಶುದ್ಧಿಯಿಂದ ಮಾಡುವ ಸೇವೆಗೆ ಶಿವನೇ ಭಕ್ತರು, ದಾನಿಗಳ ರೂಪದಲ್ಲಿ ಬಂದು ಸಹಾಯ ಮಾಡುತ್ತಾನೆಂಬುದಕ್ಕೆ ಶ್ರೀಮಠ ಒಂದು ಉತ್ತಮ ನಿದರ್ಶನ. ಪೂಜ್ಯ ಶ್ರೀಗಳವರ





ಸೇವೆಗೆ ಮನಸೋತು ತಾಯಿ ಅನ್ನಪೂರ್ಣೇಶ್ವರಿ ನೆಲಸಿ ಆಶೀರ್ವದಿಸುತ್ತಿದ್ದಾಳೆ. ಪರಮಪೂಜ್ಯ ಶ್ರೀಗಳವರು ತಪಶ್ಶಕ್ತಿ ಶ್ರೀ ಸಿದ್ಧಗಂಗಾ ಗುರು ಪರಂಪರೆಯ ಅನುಗ್ರಹದಿಂದ ಜಂಗಮ ಜೋಳಿಗೆ ಅಕ್ಷಯ ಪಾತ್ರೆಯಾಗಿದೆ.

ಅನೇಕ ಜಾದೂಗಾರರು ತಾವು ಕಲಿತಿರುವ ಕಣ್‌ಕಟ್ಟು ವಿದ್ಯೆಯಿಂದ ಕ್ಷಣ ಮಾತ್ರದಲ್ಲಿ ಕೈಗಡಿಯಾರ, ಉಂಗುರ, ಚೇಳು, ನೋಟು, ಪಕ್ಷಿ ಮುಂತಾದವುಗಳನ್ನು ಸೃಷ್ಟಿಸುವುದನ್ನು ಕೇಳಿದ್ದೇವೆ. ಇದಕ್ಕೆ ಜಾದೂ ವಿದ್ಯೆ ಎಂದು ಕರೆಯುತ್ತಾರೆ. ನೋಡುಗರ ಕಣ್ಣಿಗೆ ಇದು ಭ್ರಮೆಯಾಗಿ ಕಾಣಿಸುತ್ತದೆ. ಕೆಲವೊಮ್ಮೆ ನೋಡುಗರ ಕಣ್ಣುತಪ್ಪಿಸಿ ತಮ್ಮಲ್ಲಿ ಬಚ್ಚಿಟ್ಟುಕೊಂಡಿದ್ದ ವಸ್ತುಗಳನ್ನು ತೆಗೆದು ತೋರಿಸುವುದುಂಟು. ಇಂತಹ ಕ್ರಿಯೆಗಳಿಗೆ ಪವಾಡದ ಲೇಪ ಹಚ್ಚಿ ಪ್ರಚಾರ ಪಡೆಯುವವರನ್ನು ನೋಡಿದ್ದೇವೆ, ಆದರೆ ಹತ್ತು ಸಾವಿರ ಬಡಮಕ್ಕಳಿಗೆ ಹಸಿದ ಹೊಟ್ಟೆಯನ್ನು ತಣಿಸುವ ಪವಾಡ ಮಾಡುವವರನ್ನು ಜಗತ್ತಿನ ಯಾವ ಭಾಗದಲ್ಲೂ ಕೇಳಿಲ್ಲ. ಇಡೀ ಜಗತ್ತೇ ಅಚ್ಚರಿ ಪಡುವಂತಹ ಪವಾಡ ಇಲ್ಲಿ ಪ್ರತಿನಿತ್ಯ ನಡೆಯುತ್ತದೆ. ಈ ಪವಾಡವನ್ನು ಮಾಡಿಯೂ ಮಾಡದಂತಿದ್ದಾರೆ ಪೂಜ್ಯ ಶ್ರೀಗಳವರು. ಬಸವಣ್ಣನವರು ಇಂತಹ ನಿರ್ಲಿಪ್ತರನ್ನು ಕಂಡು

**ಮಾಡುವಂತಿರಬೇಕು, ಮಾಡದಂತಿರಬೇಕು**
**ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು**
**ಕೂಡಲ ಸಂಗಮದೇವರ ನೆನೆಯುತ್ತ ನೆನೆಯುತ್ತ**
**ನೆನೆಯದಂತಿರಬೇಕು.**

ಇದು ದಾಸೋಹಿಯ ನಿಲವು. ಅಲ್ಲದೆ ಇದು ದಾಸೋಹದ ಪರಮ ಧ್ಯೇಯುವೂ ಆಗಿದೆ. ಶರಣರು ದಾನ ಮತ್ತು ದಾಸೋಹಗಳಲ್ಲಿಯ ಒಂದು ಮುಖ್ಯವಾದ ಅಂತರವನ್ನು ಗುರುತಿಸಿದ್ದಾರೆ. ಜೇಡರ ದಾಸಿಮಯ್ಯ ಹೇಳಿದಂತೆ "ಇಳೆ ನಿಮ್ಮ ದಾನ, ಎತ್ತು ನಿಮ್ಮದಾನ, ಸುತ್ತಿ ಹರಿಯುವ ಸಾಗರವೆಲ್ಲ ನಿಮ್ಮದಾನ' ದಯಾಮಯನಾದ ಪರಶಿವನು ಇಡೀ ಪ್ರಕೃತಿ ಸಂಪತ್ತನ್ನು ಮಾನವನಿಗೆ ನೀಡಿರುವ ದಾನವಾಗಿದೆ. ಶಿವ ಕೊಟ್ಟ ದಾನವನ್ನು ಸಮಾಜದ ಒಳಿತಿಗಾಗಿ ವಿನಿಯೋಗವಾಗುವಂತೆ ನೋಡಕೊಳ್ಳಬೇಕು. ಅಂತಹ ಪುಣ್ಯ ಕಾರ್ಯವನ್ನು ಪೂಜ್ಯ ಶ್ರೀಗಳವರು ಕಳೆದ ಎಂಭತ್ತೇಳು ವರ್ಷಗಳಿಂದ ಮಾಡುತ್ತಾ ಬಂದಿದ್ದಾರೆ.

ಶ್ರೀಮಠದಲ್ಲಿ ವ್ಯಾಸಂಗ ಮಾಡುವ ಮಕ್ಕಳಿಗೆ ಬರೀ ಅಕ್ಷರ ಜ್ಞಾನವನ್ನಷ್ಟೇ ಕಲಿಸುವುದಿಲ್ಲ. ಜೊತೆಗೆ ಸಮಾಜದಲ್ಲಿ ಹೇಗೆ ಬದುಕಬೇಕು, ಜೀವನದಲ್ಲಿ ನಮ್ಮ ಸಂಸ್ಕೃತಿ, ನೈತಿಕ ಮೌಲ್ಯಗಳನ್ನು ಹೇಗೆ ಅಳವಡಿಸಿಕೊಂಡು ಭವ್ಯ ಭವಿಷ್ಯವನ್ನು ರೂಪಿಸಿಕೊಂಡು ಆದರ್ಶವ್ಯಕ್ತಿಯಾಗಿ, ನಾಗರಿಕರಾಗಿ, ಆರೋಗ್ಯವಂತ ಸಮಾಜವನ್ನು ರೂಪಿಸಿಕೊಳ್ಳಬೇಕೆಂಬುದನ್ನು ಪ್ರತಿನಿತ್ಯ ಸಂಜೆ ನಡೆಯುವ ಸಾಮೂಹಿಕ ಪ್ರಾರ್ಥನಾ ಸಭೆಯಲ್ಲಿ ಸಾನ್ನಿಧ್ಯ ವಹಿಸಿ ಉಪದೇಶ ಮಾಡಿ ಅವರು ಹೃದಯದಲ್ಲಿ ಪ್ರೀತಿ, ರಾಷ್ಟ್ರಪ್ರೇಮ, ದೀನದಲಿತರ ಬಗ್ಗೆ ಅನುಕಂಪ, ಗುರು ಹಿರಿಯರಲ್ಲಿ ಭಕ್ತಿ, ಕಾಯಕ ನಿಷ್ಠೆ, ಸ್ವಾಭಿಮಾನ, ಪ್ರಾಮಾಣಿಕತೆ, ಬೇರೆ ಧರ್ಮಗಳ ಬಗ್ಗೆ ಪ್ರೀತಿ, ವಿನಯ, ಸಜ್ಜನಿಕೆ ಇವೇ ಮೊದಲಾದ ವಿಚಾರಗಳ ಬಗ್ಗೆ ಅರ್ಥವಾಗುವ ರೀತಿಯಲ್ಲಿ ಕಥೆಗಳನ್ನು ಉದಾಹರಣೆಯಾಗಿ ಹೇಳುವುದರ ಮೂಲಕ ತಿಳಿಸಿಕೊಡುವ, ಮಾನವೀಯತೆಯ ಸದ್ಗುಣಗಳನ್ನು ಬಿತ್ತುವ ಪೂಜ್ಯರ ದೂರದೃಷ್ಟಿ, ಮಕ್ಕಳ ಮೇಲಿನ ಕಳಕಳಿ ಅನುಪಮವಾದುದು.

ಶ್ರೀಮಠದಲ್ಲಿ ಶಿಕ್ಷಣವ ಪಡೆದ ಲಕ್ಷಾಂತರ ವಿದ್ಯಾರ್ಥಿಗಳು ಸಮಾಜದ ಮುಖ್ಯ ವಾಹಿನಿಯಲ್ಲಿ, ದೇಶ ವಿದೇಶಗಳಲ್ಲಿ ನಾನಾ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಪೂಜ್ಯರ ಆಶಯದಂತೆ ಪ್ರಾಮಾಣಿಕರಾಗಿ, ನಿಷ್ಠೆ, ಶ್ರದ್ಧೆಯಿಂದ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿದ್ದಾರೆ. ಅವರೆಲ್ಲರ ದಿನಚರಿ ಪ್ರಾರಂಭವಾಗುವುದು ಪರಮಪೂಜ್ಯರ ದಿವ್ಯ ಸ್ಮರಣೆಯಿಂದ. ಇದರಿಂದ ಅಂದಿನ ಕೆಲಸಗಳಲ್ಲಿ ಯಾವುದೇ ರೀತಿಯ ಅಡೆ ತಡೆಯಿಲ್ಲದೆ ಸುಸೂತ್ರವಾಗಿ ಹೂವನ್ನು ಎತ್ತಿದಷ್ಟೇ ಸರಾಗವಾಗಿ ನಡೆಯುತ್ತದೆ ಎಂಬ ನಂಬಿಕೆ, ಆತ್ಮವಿಶ್ವಾಸ.

ಹನ್ನೆರಡನೆ ಶತಮಾನದಲ್ಲಿ ಜಡ್ಡುಗಟ್ಟಿದ ಸಮಾಜದಲ್ಲಿ ತಮ್ಮ ನಡೆನುಡಿಗಳಿಂದ ನವಚೈತನ್ಯವುಂಟಾಗುವಂತೆ ಮಾಡಿ, ಆದರ್ಶ ಜೀವನ ನಡೆಸಿ, ಲೋಕಮಾನ್ಯರಾದ ಬಸವಾದಿ ಶರಣರ ಒಂದೊಂದು ವಿಶಿಷ್ಟ ಗುಣಗಳು ಪರಮಪೂಜ್ಯ ಶ್ರೀಗಳವರಲ್ಲಿ ಮೇಳೈಸಿವೆ. ಅವರಲ್ಲಿ ಶಿವಜ್ಞಾನವಿದೆ, ದಾಸೋಹಭಾವವಿದೆ, ಶಿವಯೋಗ ಸಿದ್ಧಿಯಿದೆ, ಭಕ್ತಿಜ್ಞಾನವಿದೆ, ಆತ್ಮಜ್ಞಾನವಿದೆ, ಸಮ್ಯಕ್ ಜ್ಞಾನವಿದೆ, ಸ್ಮರಣೆಯಿದೆ, ಅರ್ಪಣಾಭಾವವಿದೆ, ಕಾಯಕ ನಿಷ್ಠೆಯಿದೆ, ಆತ್ಮತೇಜಸ್ಸಿದೆ, ಪ್ರಸಾದಿತ್ವವಿದೆ, ಅನುಭಾವಯೋಗವಿದೆ; ಆತ್ಮನೈವೇದ್ಯವಿದೆ, ವೈರಾಗ್ಯವಿದೆ, ನಿಜದನಿಲುವಿದೆ, ನಿಷ್ಠುರತೆಯಿದೆ, ನಿರ್ಲಿಪ್ತತೆಯಿದೆ, ಜೀವಕಾರುಣ್ಯವಿದೆ, ಅರಿವಿನ ಆಚಾರವಿದೆ, ಬಸವ ಭಕ್ತಿಯಿದೆ, ಲೋಕಜ್ಞಾನವಿದೆ, ಆತ್ಮಸಾಕ್ಷಿ ಪ್ರಜ್ಞೆಯಿದೆ ಹೀಗೆ ಶರಣರ ಒಂದೊಂದು ಅಪೂರ್ವ ಗುಣಗಳು ಪೂಜ್ಯರಲ್ಲಿ ಸಂಗಮವಾಗಿದೆ. ಹಾಗಾಗಿ ಪರಮಪೂಜ್ಯರ ದರ್ಶನ ಮಾಡಿದರೆ ಬಸವಾದಿ ಶರಣರ ದರ್ಶನ ಮಾಡಿದಂತಾಗುತ್ತದೆ.

ಪರಮಪೂಜ್ಯ ಶ್ರೀಗಳವರು ತಮ್ಮ ಆರಾಧ್ಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳು ಹಾಕಿಕೊಟ್ಟ ಭದ್ರಬುನಾದಿಯ ಮೇಲೆ ತಾವೇ ಕಲ್ಲುಗಳನ್ನು ಹೊತ್ತು ಭವ್ಯವಾದ ಕಟ್ಟಡಗಳನ್ನು ಕಟ್ಟಿದ್ದಾರೆ. ಅವರಿಟ್ಟ ಒಂದೊಂದು ಕಲ್ಲುಗಳು ಪೂಜ್ಯರ ನಾಮಸ್ಮರಣೆ ಮಾಡುತ್ತಿವೆ. ಶ್ರೀಮಠವನ್ನು ಜ್ಞಾನ ಗಂಗೋತ್ರಿಯನ್ನಾಗಿಸಿದ್ದಾರೆ. ದಾಸೋಹದ ಮಹಾಮನೆಯನ್ನಾಗಿಸಿ ಇಡೀ ದೇಶವೇ ಅಚ್ಚರಿಪಡುವಂತೆ ಮಾಡಿದ್ದಾರೆ. ಕರ್ಮಯೋಗಿ ಸಿದ್ಧರಾಮ ಹೇಳಿದಂತೆ 'ಕಟಿದ ಕಲ್ಲು ಲಿಂಗವೆನಿಸಿತ್ತು, ಕಟೆಯಾದ ಕಲ್ಲು ಕಲ್ಲೆನಿಸಿತ್ತು, ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ' ಎಂಬ ಮಾತು ಗಮನಾರ್ಹವಾದುದು. ಅವರೇ



ಮತ್ತೊಂದು ವಚನದಲ್ಲಿ ಗುರು ಶಿಷ್ಯರ ಸಂಬಂಧವನ್ನು ಅರ್ಥಪೂರ್ಣವಾಗಿ ಭಾವಬಂಧುರವಾಗಿ ಧ್ವನಿಪೂರ್ಣವಾಗಿ ಅಭಿವ್ಯಕ್ತಪಡಿಸಿದ್ದಾರೆ.

**ಶಿಷ್ಯನೆಂಬ ವನಕ್ಕೆ ವಸಂತ ನೋಡಾ ಗುರು**
**ಶಿಷ್ಯನೆಂಬ ತಿಮಿರಕ್ಕೆ ಜ್ಯೋತಿ ನೋಡಾ ಗುರು**
**ಶಿಷ್ಯನೆಂಬ ರಾತ್ರಿಗೆ ಸೂರ್ಯ ನೋಡಾ ಗುರು**
**ಶಿಷ್ಯನೆಂಬ ನನಗ ಪ್ರಕೃಷ್ಟ ಪ್ರಮಥ ಚಿಂತಾಮಣಿ**
**ಚೆನ್ನಬಸವ ಗುರು ಕಪಿಲ ಸಿದ್ಧಮಲ್ಲಿಕಾರ್ಜುನಾ.**

ತಮ್ಮ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳಿಗೂ ತಮಗೂ ಇದೇ ಸಂಬಂಧ ಮಾದರಿಯದ್ದೆಂದು ಪೂಜ್ಯರೇ ಅನೇಕ ಸಂದರ್ಭಗಳಲ್ಲಿ ಸ್ಮರಿಸಿಕೊಂಡಿದ್ದಾರೆ. ಪೂಜ್ಯರು ದಿನನಿತ್ಯ ತಮಗೆ ಎದುರಾದ ಅನೇಕ ಕಠಿಣ ಪರಿಸ್ಥಿತಿಯನ್ನು ಆತ್ಮಬಲದಿಂದ, ದೃಢವಿಶ್ವಾಸದಿಂದ ಹಿಮ್ಮೆಟ್ಟಿಸಿದರು. ಅವರಲ್ಲಿ ಮನೆ ಮಾಡಿಕೊಂಡಿದ್ದ ಕರ್ತವ್ಯ ನಿಷ್ಠೆ, ಶ್ರದ್ಧೆ, ಬದ್ಧತೆ, ಕ್ರಿಯಾಶಕ್ತಿ, ಛಲ ಇವುಗಳ ಮುಂದೆ ಬಂದ ಕಷ್ಟಗಳೆಲ್ಲ ಮಂಜಿನಂತೆ ಕರಗಿ ಜ್ಞಾನಗಂಗೆಯಾಗಿ, ಕಾಯಕ ಗಂಗೆಯಾಗಿ, ಚಿಂತನ ಹಾಗೂ ಕಾರುಣ್ಯಗಂಗೆಯಾಗಿ ಹರಿದು ಶ್ರೀಮಠದ ಕೀರ್ತಿಯನ್ನು ಅಷ್ಟದಿಕ್ಕುಗಳಿಗೂ ಪಸರಿಸುವಂತೆ ಮಾಡಿದೆ. ನಿಸ್ವಾರ್ಥದಿಂದ ಮಾಡುವ ಸೇವೆಗೆ ಶಿವನ ಬೆಂಬಲ, ಹಾರೈಕೆ, ಆಶೀರ್ವಾದ ಸದಾ ಇರುತ್ತದೆ ಎಂಬುದಕ್ಕೆ ಪೂಜ್ಯ ಶ್ರೀಗಳವರು ಒಂದು ಜ್ವಲಂತ ನಿದರ್ಶನ. ಬಸವಣ್ಣನವರು ಹೇಳಿದಂತೆ :

**ನೀನೊಲಿದರೆ ಕೊರಡು ಕೊನರುವುದಯ್ಯ**
**ನೀನೊಲಿದರೆ ಬರಡು ಹಯನಹುದಯ್ಯ**
**ನೀನೊಲಿದರೆ ವಿಷಯಮೃತವಹುದಯ್ಯ**
**ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲಿಪ್ಪವು**
**ಕೂಡಲಸಂಗಮದೇವ.**

ಪರಶಿವನಲ್ಲಿ ಅರ್ಪಿಸಿಕೊಂಡ ಮೇಲೆ ಇನ್ನೇತರ ಭಯ ! ಶಿವನ ಕರುಣೆಯಿರುವುದರಿಂದಲೇ ಶ್ರೀಮಠದ ಕಾರ್ಯ ಚಟುವಟಿಕೆಗಳು ಆಕಾಶದೆತ್ತರಕ್ಕೆ ಬೆಳೆದು ನಿಂತಿರುವುದು.

ಪರಮಪೂಜ್ಯ ಶ್ರೀಗಳವರ ಶೈಕ್ಷಣಿಕ, ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಕರ್ನಾಟಕ ಸರ್ಕಾರ 'ಕರ್ನಾಟಕ ರತ್ನ', 'ಬಸವ ಪುರಸ್ಕಾರ', ರಾಷ್ಟ್ರೀಯ ಪ್ರಶಸ್ತಿ, ಕರ್ನಾಟಕ ಹಾಗೂ ಬೆಂಗಳೂರು ವಿಶ್ವವಿದ್ಯಾನಿಲಯಗಳು ಗೌರವ ಡಾಕ್ಟರೇಟ್, ಕೇಂದ್ರ ಸರ್ಕಾರ 'ಪದ್ಮಭೂಷಣ' ಪ್ರಶಸ್ತಿಯನ್ನು ನೀಡಿ ಧನ್ಯತೆಯನ್ನು ಪಡೆದಿದೆ. ಇದರಿಂದ ಪ್ರಶಸ್ತಿಗಳಿಗೆ ಗೌರವ ಮೌಲ್ಯ ಹೆಚ್ಚಿದಂತಾಗಿದೆ.

ಏಪ್ರಿಲ್ ೧ಕ್ಕೆ ನೂರು ಒಂಬತ್ತು ತುಂಬಿ ನೂರು ಹತ್ತನೇ ವರ್ಷಕ್ಕೆ ಶಿವಹೆಜ್ಜೆಯನ್ನಿಡುತ್ತಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲೋಕಸಹಿತರೂ ಹೌದು, ಲೋಕ ನಿರ್ಲಿಪ್ತರೂ ಹೌದು. ಅವರದು ಬುದ್ಧನ ಪ್ರಬುದ್ಧತೆ, ಏಸುಕ್ರಿಸ್ತನ ಲೇಸಿನ ಬಯಕೆ, ಮಹಾವೀರನ ಅಹಿಂಸೆ, ಪೈಗಂಬರನ ಪ್ರವಾದಿತ್ವ, ಪರಮಹಂಸರ ಪ್ರಸನ್ನತೆ, ವಿವೇಕಾನಂದರ ವಿಚಾರ ವಿವೇಕ, ಕಬೀರನ ಜೀವ ಕಳಕಳಿ, ಅರವಿಂದರ ಆಧ್ಯಾತ್ಮದರಿವು, ರಮಣ ಮಹರ್ಷಿಯ ರಾಜಯೋಗ. ಎಂತಲೇ ಸಿದ್ಧಗಂಗಾ ಪೂಜ್ಯರಂತಹ ಲೋಕ ದಾರ್ಶನಿಕರ ಕಣ್ಣೆದುರಿಗೆ ನಾವು ಇದ್ದೇವೆಂಬುದೇ ಒಂದು ಪುಣ್ಯಯೋಗ. ನಾಡಿನ ಹಿರಿಯ ಜಾನಪದ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪನವರ ಈ ನುಡಿನಮನ ಪೂಜ್ಯ ಶ್ರೀಗಳವರ ಮೇರುಸದೃಶ ಘನಶಿವ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ.

* * *







# ಸಿದ್ಧಗಂಗೆಯ ನಿರ್ಭಾವಯೋಗಿ

– ಕೋ.ರಂ. ಬಸವರಾಜು *

***ಸುಳಿವಡೆ ಒಡಲಿಲ್ಲ ನಿಂದಡೆ ನೆಳಲಿಲ್ಲ***
***ನಡೆದಡೆ ಗಮನವಿಲ್ಲ ನುಡಿದಡೆ ಶಬ್ದವಿಲ್ಲ***
***ದಗ್ಧಪಟನ್ಯಾಯವಾಗಿ***
***ಉಂಡಡೆ ಉಪಾಧಿಯಿಲ್ಲ ಉಣದಿರ್ದಡೆ ಕಾಂಕ್ಷೆಯಿಲ್ಲ***
***ಯಥಾಲಾಭಸಂತುಷ್ಟನಾಗಿ***
***ಸ್ತುತಿಯಿಲ್ಲ ನಿಂದೆಯಿಲ್ಲ ನಂಟಿಲ್ಲ ಹಗೆಯಿಲ್ಲ***
***ಅರಿವಿಲ್ಲ ಮರಹಿಲ್ಲ***
***ತಾನೆಂಬ ನೆನಹಿಲ್ಲವಾಗಿ***
***ಸೌರಾಷ್ಟ್ರ ಸೋಮೇಶ್ವರ ಜಂಗಮರು***
***ಲಿಂಗಪ್ರಾಣಿಗಳಾಗಿ ಅಂಗವ ಮರೆಗೊಂಡು***
***ಎಂತಿರ್ದೊಡಂ ಎಂತು ನಡೆದೊಡಂ ಅಂತೆ ಸಂತ***

**(ವ. 377)**

ಇಂತೆಂದು ನಿರವಿಸಿದ ಶರಣ ಆದಯ್ಯ ಪರಜಂಗಮ ಲಕ್ಷಣಕ್ಕೆ ಸಿದ್ಧಗಂಗೆಯ ಪರಮಪೂಜ್ಯರು ಪ್ರಜ್ವಲ ಜೀವಂತ ಉದಾಹರಣೆಯಾಗಿದ್ದಾರೆ. ಇಂಥ ಪರಜಂಗಮ ಪದದೊಳಗಿರುವ ಪರಮನಿರಂಜನರ ಮನವು ಜಪಯೋಗದಿಂದ ಭಾವವಾಗಿ ಮಾರ್ಪಟ್ಟಿದೆ.

**ಭಾವವೆಂದರೆ –**

**'ಭಾವೋ ಮಾನಸಚೇಷ್ಟಾತ್ಮಾ ಪರಿಪೂರ್ಣಃ ಶಿವಾಶ್ರಯಃ'** ಎಂಬಂತೆ ಕರಣೇಂದ್ರಿಯಗಳಲ್ಲಿ ಶಿವನ ನೆನಹನ್ನೇ ತುಂಬಿಕೊಂಡ ಮನಸ್ಸಿನ ಶುದ್ಧ ವ್ಯಾಪಾರ. ಸಿದ್ಧಗಂಗೆಯ ಶಿವಕುಮಾರಶಿವಯೋಗಿಗಳೂ ತಮ್ಮ ಅಂಗೇಂದ್ರಿಯಂಗಳಲ್ಲಿ ಮಹಾಲಿಂಗನ ನೆನಹನ್ನೇ ತುಂಬಿಕೊಂಡು ಭಾವಧ್ಯಾನದಿಂದ ಭಾವಯೋಗಿಯಾಗಿದ್ದಾರೆ. ಭಾವಧ್ಯಾನವೆಂದರೆ ಶಿವೋಽಹಂ ಭಾವಯೋಗಿಯಾಗಿದ್ದಾರೆ. ಭಾವಧ್ಯಾನವೆಂದರೆ ಶಿವೋಽಹಂ ಶಿವನೇ ನಾನೆಂಬ ಭಾವನೆಯಿಂದ ಸ್ವಸ್ವರೂಪಾನುಸಂಧಾನ ಮಾಡುವುದು. ಹೀಗೆ ಭಾವಧ್ಯಾನ ಮಾಡುವುದರಿಂದ ಭಾವಶುದ್ಧಿಯುಂಟಾಗಿ ಶಿವೋಽಹಂ ಎಂಬ ಭಾವವೂ ಕೂಡ 'ಕಟ್ಟಿಗೆಯೆಲ್ಲವೂ ಉರಿದ ಮೇಲೆ ಬೆಂಕಿಯು ತಾನೇ ತಣ್ಣಗಾಗುವಂತೆ' ಶಾಂತವಾಗುತ್ತದೆ. ಇದಕ್ಕೆ 'ನಿರ್ಭಾವಯೋಗ' ಎಂದು ಹೆಸರು.

**ಅಹಂ ಬ್ರಹ್ಮೇತಿಭಾವಸ್ಯ ವಸ್ತುದ್ವಯಸಮಾಶ್ರಯಃ ।**
**ಏಕೀಭೂಯ ಚಿದ್ವ್ಯೋಮ್ನಿ ತದಭಾವೋ ವಿನಿಶ್ಚಿತಃ ॥**

ಎಂಬಂತೆ ನಮ್ಮ ಮಹಾಶಿವಯೋಗಿಗಳ ಶಿವೋಹಂ ಎಂಬ ವಸ್ತುದ್ವಯಾಶ್ರಯ ಭಾವವಳಿದು ಚಿದಾಕಾಶದಲ್ಲಿ ಐಕ್ಯತೆಯನ್ನು ಪಡೆದ ಮೇಲೆ ಏಕೀಭಾವವುಳಿದು, ಅದೂ ಕೂಡ ಮಹಾಲಿಂಗದಲ್ಲಿ ಸ್ಥಿರವಾಗಿದೆ. ಈ ಭಾವಸ್ಥಿರತೆಗೆ ನಿಷ್ಪತ್ತಿ ಎಂದು ಹೆಸರು. ಈ ಭಾವವು ನಿಷ್ಪತ್ತಿಯಾದುದರಿಂದ ಅವರ ಎಲ್ಲ ಭಾವಗಳೂ ಶಿವಭಾವಗಳೇ ಆಗಿವೆ.

**'ಶಿವಭಾವೇ ಸ್ಥಿರೀಜಾತೇ ನಿರ್ಲೇಪಸ್ಯಮಹಾತ್ಮನಃ ।**
**ಯೇ ಯೇ ಭಾವಾಃ ಸಮುತ್ಪನ್ನಾಃ ತೇ ಶಿವಮಯಸ್ಮೃತಾಃ ॥**

ಇದು ನಮ್ಮ ಪರಮಪೂಜ್ಯರ ನಿರ್ಭಾವಯೋಗ ! ಇಲ್ಲಿ ನಿರ್ಭಾವವೆಂದರೆ ಭಾವದ ಆತ್ಯಂತಿಕ ಅಭಾವವಲ್ಲ. ಪರಂತು ಭಾವದ ಸ್ಥಿರತೆ ಅಥವಾ ನಿಷ್ಪತ್ತಿ ಎಂದರ್ಥ.

ಇಂಥ ನಿರ್ಭಾವಯೋಗಿಗೆ ನಾಮಸೀಮೆಗಳ ಪರಿಧಿಯಿಲ್ಲ ಮತ್ತು

**ಸುಕೃತೀ ದುಷ್ಕೃತೀ ವಾಪಿ ಬ್ರಾಹ್ಮಣೋಽಂತ್ಯಜೋಽಪಿ ವಾ ।**
**ಶಿವೈಕಭಾವಯುಕ್ತಾನಾಂ ಸದೃಶೋ ಭವತಿ ಧ್ರುವಂ ॥**

ಎಲ್ಲೆಲ್ಲಿಯೂ ಶಿವನ ಹೊರತು ಮತ್ತೊಂದರ ಜ್ಞಾನವಿಲ್ಲದಿರುವ ಶಿವಯೋಗಿಗೆ ಪುಣ್ಯಶಾಲಿಯೂ ಒಂದೇ ಪಾಪಿಯೂ ಒಂದೇ, ಬ್ರಾಹ್ಮಣನೂ ಒಂದೇ ಚಾಂಡಾಲನೂ ಒಂದೇ ಆಗಿ ತೋರುವರು.

ಮೈಲಾರದ ಶರಣರು ನಿರ್ಭಾವಯೋಗಿಯ ಲಿಂಗಸ್ಥಿತಿಯನ್ನು ಸುಂದರವಾಗಿ ನಿರವಿಸುತ್ತಾರೆ. ಅದು ನಮ್ಮ ಪರಮಪೂಜ್ಯರಿಗೆ ಪರಿಪೂರ್ಣವಾಗಿ ಅನ್ವಯಿಸುತ್ತದೆ.

**ಪರಮಪೂಜ್ಯರ ಭಾವವೇ ಇಷ್ಟಲಿಂಗ ಅನುಭಾವವೇ ಪ್ರಾಣಲಿಂಗ ನಿರ್ಭಾವವೇ ಭಾವಲಿಂಗವಾಗಿದೆ.**

**(ತ್ರಿವಿಧಿ 185)**

* ನಿವೃತ್ತ ಸಹಾಯಕ ಪ್ರಾಧ್ಯಾಪಕರು, ಶ್ರೀ ಸಿದ್ಧಗಂಗಾಮಠ.

ಅವರ ಪಾದವೇ ಇಷ್ಟಲಿಂಗ, ನಡು (ಶರೀರದ ಮಧ್ಯಭಾಗ)ವೇ ಪ್ರಾಣಲಿಂಗ, ಮಸ್ತಕವೇ ಭಾವಲಿಂಗವಾಗಿದೆ.

(ತ್ರಿವಿಧಿ 186)

ಅವರ ನಡೆಯೇ ಇಷ್ಟಲಿಂಗ, ನುಡಿಯೇ ಪ್ರಾಣಲಿಂಗ
ನಡೆನುಡಿಗಳ ಸಮರಸವೇ ಭಾವಲಿಂಗವಾಗಿದೆ.

(ತ್ರಿವಿಧಿ 190)

ಇದೆಲ್ಲಕ್ಕಿಂತಲೂ ಪರಮಪೂಜ್ಯರ ಶಿವತನುವಿಗೆ ಅನ್ವಯಿಸಲೆಂಬಂತಿದೆ ಶರಣರ ಈ ತ್ರಿಪದಿ.

**'ನಿಲವು ನಿಂತುದೆ ಇಷ್ಟ ! ಕುಳಿತುಕೊಂಡುದೆ ಪ್ರಾಣ !**
**ಮಲಗಿಕೊಂಡಿಹುದೆ, ಸಲೆ ಭಾವ ಲಿಂಗವೆಂ**
**ದೊರೆದಗುರುವೆ ಕೃಪೆಯಾಗು' (ತ್ರಿವಿಧಿ 191)**

ಪರಮಪೂಜ್ಯರು ನಿಂತುಕೊಂಡರೆ ಇಷ್ಟಲಿಂಗ, ಕುಳಿತುಕೊಂಡರೆ ಪ್ರಾಣಲಿಂಗ ಮಲಗಿಕೊಂಡರೆ ಭಾವಲಿಂಗವಾಗಿ ಕಾಣುತ್ತಾರೆ !

**ಇದು ಸಿದ್ಧಗಂಗೆಯ ನಿರ್ಭಾವಯೋಗಿಯ ನಿಲವು !!**

* * *

## ಶ್ರೀವಾಣಿ

ಮನುಷ್ಯ ನಡೆದುಬಂದ ದಾರಿಯಲ್ಲಿ ನಡೆದ ಯುದ್ಧಗಳೆಷ್ಟು? ನಷ್ಟವಾದ ಜೀವರತ್ನಗಳೆಷ್ಟು? ಕಳೆದುಕೊಂಡ ಜೀವನ ಮೌಲ್ಯಗಳೆಷ್ಟು? ಇದು ಬೇಕೆ? ಮುಂದುವರಿಯ ಬೇಕೆ? ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ, ಭಾಷೆಯ ಹೆಸರಿನಲ್ಲಿ, ದೇಶದ ಹೆಸರಿನಲ್ಲಿ, ವ್ಯಕ್ತಿಗಳ ಹೆಸರಿನಲ್ಲಿ ನಡೆದ ಯುದ್ಧಗಳನ್ನು ಗಮನಿಸಿದಾಗ ಜೀವನ ಕಲೆಯನ್ನು ಅರಿತಿದ್ದೇವೆಯೇ ಎಂದು ಸಂಶಯ ಪಡುವಂತಾಗಿದೆ.

* * *

ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದುದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನುಗಳಿಸಬೇಕು. ಧರ್ಮಕ್ಕೆ ವಿರುದ್ಧವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.



## ಸನ್ನಿಧಿಗೆ ಶರಣು

ಶರಣಂಗೆ ಶರಣು ಶ್ರೀ ಗುರುವಿಂಗೆ ಶರಣು
ಶತಾಯುಷಿಗೆ ಶರಣು ಶತಮಾನದ
ಅನುಭಾವಾಮೃತ ಸಿಂಧುವಿಗೆ ಶರಣು
ಆಚಾರಕ್ಕರಸಾಗಿ, ವಿಚಾರಕ್ಕೆ ಮೇರು ಪರ್ವತವಾಗಿ
ಜ್ಞಾನಕ್ರಿಯೆಗಳ ಸಂಗಮದ ಪರಿಪಕ್ವತೆಗೆ ಶರಣು.

ಶಿವಯೋಗಿ ಸಿದ್ಧರಾಮನ ಕರ್ಮಯೋಗ
ಅಲ್ಲಮನ ವೈರಾಗ್ಯ ಚೆನ್ನಬಸವಣ್ಣನ ಜ್ಞಾನ
ಮೇಳೈಸಿದ ಏಕವ್ಯಕ್ತಿತ್ವದ ಪರಿಪೂರ್ಣತೆಗೆ ಶರಣು

ಕಲಿಯುಗದ ಕಲ್ಯಾಣವು ಶ್ರೀಕ್ಷೇತ್ರದ ತಪೋನೆಲವು
ಅಭಿನವ ಬಸವಣ್ಣ ತಾನಾಗಿ ಭಾವ ಬಯಲಲ್ಲಿ
ಶೂನ್ಯ ಸಿಂಹಾಸನಾಧೀಶ್ವರನಾಗಿ ಮೆರೆಯುತಿಹ
ಶ್ರೀಶರಣಂಗೆ ಶರಣು

ಸಾವಿರ ಸಾವಿರ ಮಕ್ಕಳ ಮಾತೃ ಹೃದಯಿ
ಕರುಣೆ, ದಯೆ, ಅನುಕಂಪ ಅಮೃತದ ಕಡಲು
ನಿನ್ನೊಡಲು, ಪ್ರೀತಿ ಸಾಗರ ನಿಮ್ಮ ಮನ
ತಿದ್ದಿ, ಬುದ್ಧಿ ಹೇಳಿ ಬದುಕ ದಾರಿ ತೋರಿದ
ಧರ್ಮದೀಪಕ್ಕೆ ಶರಣು
ಅವರವರ ಭಾವಕ್ಕೆ ಅವರವರ ಭಕುತಿಗೆ ಒಲಿದು
ದಿವ್ಯಾಶೀರ್ವಾದದೆ ಸಲಹುತಿಹ
ದಿವ್ಯರೂಪಂಗೆ ಶರಣು ಶರಣು
ಬೇಡಿ ಬೇಡಿ ಬಸವಳಿದೆ ನಾ ಕಾಣದಾ ದೇವರಲ್ಲಿ
ಅನ್ನ ಅಕ್ಷರವನ್ನಿತ್ತು ಅಂದಕಾರವ ಕಳೆದ ದೇವರ
ನಿಜರೂಪದೆ ಕಂಡೆ ನಾನಿಲ್ಲಿ ಪೂಜ್ಯ ಶ್ರೀ ಶ್ರೀ ಶ್ರೀ
ವರಗುರು ಶಿವಕುಮಾರ ಸ್ವಾಮೀಜಿಯವರ
ಭವ್ಯ ಸನ್ನಿಧಿಗೆ ಶರಣು ಶರಣು.

– **ಶ್ರೀಮತಿ ನಾಗರತ್ನ ಚಂದ್ರಪ್ಪ**
ಸೋಮೇಶ್ವರಪುರಂ, ತುಮಕೂರು







# ಶ್ರೀಗಳ ಅಸಾಮಾನ್ಯ ಸಾಧನೆ ಮತ್ತು ಸಿದ್ಧಿ ಸ್ವರೂಪ

– ವಿದ್ವಾನ್ ಪಿ.ಎಸ್. ಚಂದ್ರಶೇಖರಯ್ಯ *

ಶ್ರೀಮದುದ್ದಾನ ಮಹಾಶಿವಯೋಗಿಗಳವರು ಶ್ರೀ ಸಿದ್ಧಗಂಗಾ ಮಠದ ಸೇವಾಮಣಿಹಕ್ಕೆ ಮೂರ್ತಸ್ವರೂಪ ಕೊಟ್ಟ ಮಹಾಮಹಿಮರು. ಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರರ ಜಾತ್ರಾ ಮಹೋತ್ಸವವನ್ನು ೧೯೦೫ರಲ್ಲಿ ಅಧಿಕೃತವಾಗಿ ಆರಂಭ ಮಾಡಿ ಜಾತ್ರಾ ಸ್ವರೂಪವನ್ನು ನಿಗಧಿ ಮಾಡಿ ಆಚರಣೆಗೆ ತಂದರು. ರಥೋತ್ಸವ ಅದಕ್ಕೆ ಬೇಕಾದ ಸೇವಾ ಪರಿಕರಗಳು, ಉತ್ಸವದ ವ್ಯವಸ್ಥೆ, ಅದಕ್ಕೆ ಧಾರ್ಮಿಕ ಪರಿಕಲ್ಪನೆ ಗ್ರಾಮೀಣ ರೈತರ ಆಕರ್ಷಣೆಗೆ ದನಗಳ ಜಾತ್ರೆ, ಜಾತ್ರೆಗೆ ಬಂದ ರೈತರು ಭಕ್ತಾದಿಗಳಿಗೆ ದಾಸೋಹ ಮೊದಲಾದ ಸಕಲ ವ್ಯವಸ್ಥೆಗಳನ್ನು ಪರಂಪರಾಗತವಾಗಿ ನಡೆದು ಬರುವಂತೆ ವ್ಯವಸ್ಥೆ ಮಾಡಿದರು. ಆ ಸಂಪ್ರದಾಯದ ಸೇವಾಕಾರ್ಯಗಳು ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ತಪ್ಪದೇ ಅನೂಚಾನವಾಗಿ ಅಧಿಕಗೊಂಡು ನಡೆದು ಬರುತ್ತಿವೆ. ಬೃಹದಾಕಾರವಾಗಿ ಬೆಳೆದು ಬಂದಿವೆ. ಅಂದು ಸಣ್ಣ ಪ್ರಮಾಣದಲ್ಲಿ ಆರಂಭಗೊಂಡು ೧೦–೧೫ ದಿವಸಗಳು ನಡೆದು ಜಾತ್ರಾ ಇತಿಹಾಸದ ಮೈಲುಗಲ್ಲನ್ನು ನಿರ್ಮಾಣ ಮಾಡಿದೆ. ಪರಮಪೂಜ್ಯರ ಸಂಕಲ್ಪ ಸಿದ್ಧಿ ಫಲ ಅದು.

ಶ್ರೀ ಉದ್ದಾನ ಶಿವಯೋಗಿಗಳವರು ೧೯೧೩ರಲ್ಲಿ ಆಗಿನ ಮೈಸೂರು ಸರ್ಕಾರದ ದಿವಾನರಿಗೆ ಒಂದು ಪತ್ರ ಬರೆದರು. ಪತ್ರದ ಸಾರಾಂಶ 'ನಮ್ಮದು ವೀರಶೈವ ಸಂಪ್ರದಾಯಕ್ಕೆ ಸೇರಿದ ಒಂದು ಸಣ್ಣ ಮಠ. ಮಠಕ್ಕೆ ಕೇವಲ ಒಣಭೂಮಿ ೧೬ ಎಕರೆ ಬಿಟ್ಟರೆ ಬೇರೆ ಆರ್ಥಿಕ ಮೂಲವಿಲ್ಲ. ಭಿಕ್ಷಾಟನೆ ಮಾಡಿ ಭಕ್ತಾದಿಗಳ ನೆರವಿನಿಂದ ವಿದ್ಯಾರ್ಥಿಗಳಿಗೆ ಊಟೋಪಚಾರ ನಡೆಸಿ ಸಂಸ್ಕೃತ ಪಾಠ ಹೇಳಿಸುತ್ತಿದ್ದೇವೆ. ಪಾಠ ಹೇಳಿ ಕೊಡುವ ಅಧ್ಯಾಪಕರಿಗೆ ಸರ್ಕಾರದಿಂದ ಸಂಬಳಕ್ಕೆ ಗ್ರಾಂಟ್ ಕೊಡಿ' ಎಂಬುದಾಗಿ ಬರೆದುಕೊಂಡರು. ಸರ್ಕಾರದಿಂದ ೧೯೧೬ರಲ್ಲಿ ಹತ್ತು ರೂಪಾಯಿ ಗ್ರಾಂಟ್ ದೊರೆಯಿತು. ೧೯೧೭ರಂದು ಜೂನ್ ೧೫ನೆಯ ತಾರೀಖು ೧೫ ವಿದ್ಯಾರ್ಥಿಗಳಿಂದ ಅಧಿಕೃತವಾಗಿ ಸಂಸ್ಕೃತ ಪಾಠಶಾಲೆ ಆರಂಭವಾಯಿತು. ಅಂದೇ ಉಚಿತ ಸಾರ್ವಜನಿಕ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿ ಸಮಸ್ತ ಕೋಮಿನವರಿಗೆ ಸಂಸ್ಕೃತ ಕಲಿಕೆ ಮತ್ತು ವಿದ್ಯಾರ್ಥಿನಿಲಯದಲ್ಲಿ ಅಶನವಸತಿ ಸೌಕರ್ಯ ಕಲ್ಪಿಸಿ ಸರ್ವರಿಗೂ ಮುಕ್ತಾವಕಾಶ ನೀಡಿದರು. ಒಂದು ನೂರು ವರ್ಷಗಳ ಹಿಂದೆ ಬಡ ಅನಾಥ ನಿರ್ಗತಿಕ ಮಕ್ಕಳ ವಿದ್ಯಾಭ್ಯಾಸಕ್ಕೆ ಇದ್ದ ಆಶ್ರಯ ತಾಣ ಶ್ರೀ ಸಿದ್ಧಗಂಗಾ ಮಠ ಒಂದೇ ಎಂದರೆ ತಪ್ಪಾಗಲಾರದು. ಶ್ರೀ ಉದ್ದಾನ ಶಿವಯೋಗಿಗಳವರು ಅಂದಿಗೆ ಬಡಮಕ್ಕಳ ಕಾಮಧೇನುವಾಗಿದ್ದರು. ಗ್ರಾಮ ಹಳ್ಳಿಗಳಲ್ಲಿ ಸಂಚರಿಸಿ ಬಡತನ ಅಜ್ಞಾನ ನಿರ್ಮೂಲನೆಗೆ ಮಾರ್ಗೋಪಾಯವನ್ನು ಕಲ್ಪಿಸಿ ಬಡಮಕ್ಕಳ ಬಾಳಿಗೆ ಬೆಳಕಾದರು. ನಾಡಿನ ಹಲವು ಜಿಲ್ಲೆಗಳ ಮಕ್ಕಳು ಬಂದು ಸಿದ್ಧಗಂಗಾ ಮಠದ ಆಶ್ರಯ ಪಡೆದರು.

ಶ್ರೀ ಉದ್ದಾನ ಶಿವಯೋಗಿಗಳವರು ಸ್ವಯಂ ಸಿದ್ಧರು. ವಾಕ್ ಸಿದ್ಧಿ ಸಂಪನ್ನರು. ದೈವೀವಾಣಿಯ ಸಾಕ್ಷಾತ್ಕಾರ ಪಡೆದ ದೈವೀಪುರುಷರಾಗಿದ್ದರು. ಅಘಟಿತ ಘಟನಾ ಸಾಮರ್ಥ್ಯವುಳ್ಳ ಸಿದ್ಧಶಿವಯೋಗಿಗಳು. ತ್ರೈಕಾಲಿಕ ದಿವ್ಯಜ್ಞಾನವುಳ್ಳ ಸಂತರಾದ ಶ್ರೀ ಉದ್ದಾನಶಿವಯೋಗಿಗಳವರಿಗೆ ವೀರಾಪುರದ ಶಿವಣ್ಣ ವಟುವಾಗಿ ದೊರೆತದ್ದು ದೈವಸಂಕಲ್ಪ. ನಾಡಿನ ಅಭ್ಯುದಯದ ಮುಂಬೆಳಕು. ಮಾತಾಪಿತೃಗಳ ಪುಣ್ಯದ ಬೆಳಕಾಗಿ ೧೩ನೆಯ ಸಂತತಿಯಾಗಿ ಅವತರಿಸಿದ ಬಾಲಕ ಶಿವಣ್ಣನು ಮುಂದೆ ಮಹಾಪುರುಷನಾಗಿ ಬೆಳಗುತ್ತಾನೆನ್ನುವ ಭವಿಷ್ಯವಾಣಿ ಶ್ರೀ ಉದ್ದಾನ ಗುರುಗಳ ಅಂತಃಕರಣದ ದಿವ್ಯದೃಷ್ಟಿಗೆ ಗೋಚರಿಸಿದ್ದರಬಹುದೇನೋ? ತುಮಕೂರಿನಲ್ಲಿ ಅಧ್ಯಯನ ಮಾಡುವ ಶಿವಣ್ಣನಿಗೆ ಪ್ಲೇಗ್ ಮಾರಿ ಭಯಂಕರ ರೋಗ ಸಿದ್ಧಗಂಗೆಗೆ ಅವರನ್ನು ಕರೆತರಲು ಸಹಕಾರಿಯಾಗಿರ ಬಹುದೇನೋ? ಶ್ರೀ ಮರುಳಾರಾಧ್ಯಸ್ವಾಮಿಗಳವರ ಆಕಸ್ಮಿಕ ಲಿಂಗೈಕ್ಯ ಸುದ್ಧಿ ಶಿವಣ್ಣನನ್ನು ಸಿದ್ಧಗಂಗೆಗೆ ಬರಮಾಡಿಕೊಂಡು ಲಕ್ಷಾಂತರ ಬಡ ಮಕ್ಕಳ ಬದುಕಿಗೆ ಬಾಳ ಬೆಳಗುವ ಸೂರ್ಯನಾಗಬಹುದೇ? ದೈವೀ ವಿಚಿತ್ರಾಗತಿ! ಎಂಬಂತೆ ಎಲ್ಲವೂ ದೈವದ ವಿಚಿತ್ರಗತಿಯಲ್ಲಿ ನಾವೆಲ್ಲಾ ಬಂಧಿಗಳು. ದೈವಲೀಲೆ ಊಹಿಸಲಸಾಧ್ಯವಲ್ಲವೇ? ಶ್ರೀ ಉದ್ದಾನ ಶಿವಯೋಗಿಗಳು ದಿನಾಂಕ ೩-೩-೧೯೩೦ರಂದು ಅಂದರೆ ಇಲ್ಲಿಗೆ ೮೮ ವರ್ಷಗಳ ಹಿಂದೆ ಶಿವಣ್ಣನು ಶ್ರೀ ಶಿವಕುಮಾರ ಸ್ವಾಮಿಗಳಾಗುವ ದಿವ್ಯಾನುಗ್ರಹ ಹಸ್ತಮಸ್ತಕ ಸಂಯೋಗದಿಂದ ವಿಧ್ಯುಕ್ತವಾಗಿ ನೆರವೇರಿತು. ದೈವೀ ಲೀಲೆ ತಾನು ಎಲ್ಲವನ್ನು ತನ್ನಂತೆ ನಡೆಸಿಕೊಳ್ಳುತ್ತದೆ. ಶ್ರೀ ಸಿದ್ಧಗಂಗೆಯ ಭವಿಷ್ಯದ ಭಾರತವನ್ನು ಹೊರುವ ಹೊಣೆಗಾರಿಕೆ ಶ್ರೀ

* ವಿದ್ಯಾಧಿಕಾರಿಗಳು, ಸಂಸ್ಕೃತ ವಿಭಾಗ, ಶ್ರೀ ಸಿದ್ಧಗಂಗಾಮಠ.

ಶಿವಕುಮಾರಸ್ವಾಮಿಗಳದ್ದಾಯಿತು. ತಾಯಿ ತಂದೆಗಳು ಬಂಧುಬಳಗದವರನು ಒಂದೂ ಮಾತನ್ನು ಕೇಳದೇ ಗುರುವಿನ ಆಜ್ಞೆಗೆ ತಲೆಬಾಗಿದ್ದು ಶ್ರೀ ಸಿದ್ಧಗಂಗಾ ಗುರುಪರಂಪರೆಯ ಪ್ರಬಲ ತಪಃ ಪ್ರಭಾವಲಯದ ಪ್ರಕರ್ಷಿತವಾದ ಆಕರ್ಷಣೆಯಿರಬಹುದೇನೋ. ಎಲ್ಲ ಸಿದ್ಧ ಸಾಧಕರ ಸಂತ ಶಿವಯೋಗಿಗಳ ಲೋಕಕಲ್ಯಾಣ ಕಾರುಣ್ಯದೃಷ್ಟಿಯ ದಿವ್ಯಾನುಗ್ರಹ ಶ್ರೀ ಶಿವಕುಮಾರ ಸ್ವಾಮಿಗಳನ್ನು ಎಳೆ ತಂದಿರಬಹುದೇನೋ ಬಲ್ಲವರೇ ಬಲ್ಲರು.

ಶ್ರೀ ಶಿವಕುಮಾರ ಸ್ವಾಮಿಗಳವರು ಆಶ್ರಮ ಸ್ವೀಕಾರದ ನಂತರ ಅಂತಿಮ ಬಿ.ಎ. ತರಗತಿಯ ಪರೀಕ್ಷೆ ಬರೆದು ಶ್ರೀಮಠಕ್ಕೆ ಬಂದು ಸಂಸ್ಕೃತಾಧ್ಯಯನ ಮಾಡಿದರು. ಸಂಸ್ಕೃತ ಶಾಲೆಯ ವ್ಯವಹಾರದ ಜವಾಬ್ದಾರಿಯನ್ನು ಗುರುಗಳ ಅಪ್ಪಣೆ ಮೇರೆಗೆ ಸಮರ್ಥವಾಗಿ ನಿರ್ವಾಹ ಮಾಡತೊಡಗಿದರು. ಸರಕಾರದ ಎಲ್ಲ ವ್ಯವಹಾರಗಳು ಇಂಗ್ಲಿಷ್‌ನಲ್ಲಿ ನಡೆಯುತ್ತಿತ್ತು. ಬಿ.ಎ. ಅಧ್ಯಯನ ಮಾಡಿದ ಶ್ರೀಗಳಿಗೆ ಕಷ್ಟಕರವಾಗಿ ಕಾಣಲಿಲ್ಲ. ಸಮಂಜಸವಾದ ಪತ್ರ ವ್ಯವಹಾರದಿಂದ ಸರಕಾರದ ಎಲ್ಲ ವ್ಯವಹಾರಗಳು ಸುಗಮವಾಗಿ ಸಾಗುತ್ತಿತ್ತು. ವಿದ್ಯಾರ್ಥಿಗಳ ಸಂಖ್ಯೆ ಅಧಿಕಗೊಂಡು ಖರ್ಚು ವೆಚ್ಚಗಳು ಅಧಿಕಗೊಂಡವು. ಇದರಿಂದ ಶ್ರೀ ಉದ್ದಾನಗುರುಗಳ ಕೆಂಗಣ್ಣಿಗೆ ಪಾತ್ರವಾಗಬೇಕಾಯಿತು. ಪೂರ್ಣ ಜವಾಬ್ದಾರಿಕೆಯನ್ನು ವಹಿಸಿಕೊಂಡು ಕಷ್ಟನಷ್ಟಗಳನ್ನು ಗಣನೆಗೆ ತಾರದೆ ೧೯೩೮–೩೯ರಲ್ಲಿ ಸಂಸ್ಕೃತ ಪಾಠಶಾಲೆಯನ್ನು ಕಾಲೇಜಾಗಿ ಅಭಿವೃದ್ಧಿಪಡಿಸಲು ವಿಶೇಷ ಪ್ರಯತ್ನ ಮಾಡಿದರು. ಗುರುಗಳ ಲೋಕಕಾರುಣ್ಯ, ಸಾಮಾಜಿಕ ಅಭಿವೃದ್ಧಿ, ಬಡತನ ದಾರಿದ್ರ್ಯ, ಅನಕ್ಷರತೆ ಹೋಗಲಾಡಿಸಲು ಕೈಗೊಂಡ ಪ್ರಯತ್ನಗಳನ್ನು ವಿಶೇಷವಾಗಿ ಪರಿಗಣಿಸಿ ಮುನ್ನಡೆದರು. ಶಿಷ್ಯನ ಸಾಮಾಜಿಕ ಕಳಕಳಿ, ಸೇವಾಮನೋಭಾವ ಗುರುಗಳಿಗೆ ಮೆಚ್ಚಿಗೆಯಾದರೂ ತೋರುಗೊಡದೆ ಬಹಿರಂಗವಾಗಿ ವಾಗ್ದಂಡನೆಯನ್ನು ವಿಧಿಸುತ್ತಿದ್ದರು. ನಾನಾವಿಧವಾಗಿ ಪರೀಕ್ಷೆಗಳನ್ನೊಡ್ಡಿದರು. ಪೂಜ್ಯ ಗುರುಗಳ ಕಠಿಣತರ ತರಬೇತಿಯಲ್ಲಿ ಹನ್ನೊಂದು ವರ್ಷಗಳ ಕಾಲ ನುರಿತು ಪಳಗಿದರು. ನೂರಾರು ಉಳಿಯ ಪೆಟ್ಟುಗಳನ್ನು ತಿಂದು ಸುಂದರಮೂರ್ತಿಯಾಗುವಂತೆ, ಪುಟವಿಟ್ಟ ಥಳಥಳ ಹೊಳೆವ ಸಿದ್ಧಗಂಗೆಯ ಹೊಂಗಳಶವಾಗಿ ಮೂಡಿಬಂದರು ಶ್ರೀ ಶಿವಕುಮಾರಸ್ವಾಮಿಗಳವರು. ದಿನಾಂಕ ೧೧–೧–೧೯೪೧ರಂದು ಶ್ರೀ ಉದ್ದಾನ ಶಿವಯೋಗಿಗಳವರು ಲಿಂಗೈಕ್ಯರಾದರು. ಅಂದೊಂದು ನಡೆದ ಘಟನೆಯೆಂದರೆ ಗುರುಗಳು ಕಣ್ಣಾಲಿಗಳನ್ನು ಮುಚ್ಚಿ ಬಾಹ್ಯಲೀಲೆಯನ್ನು ಮುಕ್ತಾಯ ಮಾಡಿ ಸಮಾಧಿಸ್ಥರಾದರೆಂದು ತಿಳಿದು ಶ್ರೀ ಶಿವಕುಮಾರಸ್ವಾಮಿಗಳಿಗೆ ವಿಷಯ ಮುಟ್ಟಿಸಿದರು. ಕೂಡಲೆ ಅವಸರವಸರವಾಗಿ ಬಂದು ಹಳೇಮಠದಲ್ಲಿ ಮಲಗಿದ್ದ ಶ್ರೀ ಉದ್ದಾನಶಿವಯೋಗಿಗಳವರ ಪಾದದ ಬಳಿ ನಿಂತುಕೊಂಡಾಗ ಮಂಡೆಯ ಬಳಿ ನಿಂತಿದ್ದವರು ಗಟ್ಟಿಯಾಗಿ ಬುದ್ಧೀ ಬುದ್ಧೀ ಚಿಕ್ಕವರು ಬಂದು ಪಾದದ ಬಳಿ ನಿಂತಿದ್ದಾರೆ ಎಂದಾಗ ಶ್ರೀ ಉದ್ದಾನ ಗುರುಗಳು ಒಂದು ನಿಮಿಷ ಕಣ್ಣು ತೆರೆದು ತಮ್ಮ ಪೂರ್ಣ ದೃಷ್ಟಿಯಲ್ಲಿ ಚಿಕ್ಕವರನ್ನು ನೋಡಿ, ಕೃಪಾದೃಷ್ಟಿ, ದಿವ್ಯದೃಷ್ಟಿಯ ಅನುಗ್ರಹ ಮಾಡಿ ಶಾಶ್ವತವಾಗಿ ಕಣ್ಣು ಮುಚ್ಚಿದರಂತೆ 'ಅದೇ ನನ್ನ ಗುರುಗಳು ನನಗೆ ಕೊಟ್ಟ ದಿವ್ಯಸಂಪತ್ತು, ಪೂರ್ಣಾಶೀರ್ವಾದ, ದಿವ್ಯ ಬೆಳಕು, ಅಂದು ನನಗೊಂದು ಅಪೂರ್ವ ದಿವ್ಯ ಚೈತನ್ಯ ಗುರುಗಳಿಂದ ಲಭ್ಯವಾಯಿತು. ಅದೇ ನನ್ನ ಶ್ರೀರಕ್ಷೆ ಆ ಬೆಳಗಲ್ಲಿ ನಡೆದೆವು' ಎಂಬುದು ಶ್ರೀ ಶಿವಕುಮಾರಸ್ವಾಮಿಗಳವರ ಅನುಗ್ರಹ ವಾಣಿ.

ಶ್ರೀ ಶಿವಕುಮಾರ ಸ್ವಾಮಿಗಳಿಗೆ ಶ್ರೀಮಠದ ಪೂರ್ಣಾಧಿಕಾರ ತಮ್ಮ ಗುರುಗಳು ಲಿಂಗೈಕ್ಯರಾದ ನಂತರ ೧೯೪೧ರಲ್ಲಿ ಲಭ್ಯವಾಯಿತು. ಆದರೆ ಗುರುಗಳ ಆರಾಧನೆ ಮಾಡುವಷ್ಟು ಸ್ಥಿತಿವಂತಿಕೆ ಚೈತನ್ಯವಿರಲಿಲ್ಲ. ಕಿಂ ಕರ್ತವ್ಯತಾ ಮೂಢರಾಗಿದ್ದಾಗ ಗುರುಕೃಪೆ ಅಯಾಚಿತವಾಗಿ ಪರೋಕ್ಷವಾಗಿ ಆಶೀರ್ವದಿಸಿದಾಗ ಬೆಂಗಳೂರಿನ ಭಕ್ತರು ಸಹಾಯ ಹಸ್ತ ನೀಡಿದುದರಿಂದ ಶ್ರೀ ಉದ್ದಾನ ಶಿವಯೋಗಿಗಳ ಆರಾಧನೆ ಯಶಸ್ವಿಯಾಗಿ ನೆರವೇರಿತು. ಸಂಸ್ಥೆಯ ಜವಾಬ್ದಾರಿ ತುಂಬಾ ಕಷ್ಟಕರವಾಗಿತ್ತು. ವಿದ್ಯಾರ್ಥಿನಿಲಯದ ನಿರ್ವಹಣೆಯಿಂದ ಹಣ ಕೂಡಿಡುವುದು ಸಾಧ್ಯವಾಗದೆ ಉದ್ದಾನಶ್ರೀಗಳಿಂದ ಧನ ಸಂಗ್ರಹಣೆ ಮಾಡಲಾಗಲಿಲ್ಲ. ಜನಗಳು ಶ್ರೀ ಶಿವಕುಮಾರ ಸ್ವಾಮಿಗಳಿಂದ ಸಂಸ್ಥೆ ನಡೆಸುವುದು ಕಷ್ಟ ಇವರಿಂದ ಸಾಧ್ಯವಾಗುವುದಿಲ್ಲ ಎಂದು ಮಾತನಾಡಿದ್ದನ್ನು ಶ್ರೀಗಳು ಆಗ ಸವಾಲಾಗಿ ಸ್ವೀಕರಿಸಿದರು. ಎದೆಗುಂದಲಿಲ್ಲ. ತಮ್ಮ ಗುರುಗಳ ಆಶಯದಂತೆ ಮುನ್ನಡೆದರು. ಅವಿಶ್ರಾಂತವಾಗಿ ದುಡಿಮೆ ಮಾಡಿದರು. ದುಡಿಮೆಯೇ ದೇವರೆಂದು ಭಾವಿಸಿ ಕಾರ್ಯೋನ್ಮುಖರಾದರು. ಹಳ್ಳಿಗಳ್ಳಿಗಳಲ್ಲಿ ಭಿಕ್ಷೆ ಬೇಡಿದರು. ಒಂದು ಪಾವು ದವಸ ಒಂದು ಆಣೆ ದುಡ್ಡಿಗೂ ಕೈನೀಡಿ ತಂದು ಮಠದಲ್ಲಿ ವಿದ್ಯಾರ್ಥಿಗಳನ್ನು ಪೋಷಣೆ ಮಾಡಿದರು. ನಿರಂತರ ಪರಿಶ್ರಮದ ದುಡಿಮೆ, ಶ್ರೀ ಸಿದ್ಧಲಿಂಗೇಶ್ವರರ ಕೃಪೆ, ತಮ್ಮ ಗುರುಗಳ ದಿವ್ಯಾದರ್ಶ, ಅಖಂಡ ಬ್ರಹ್ಮಚರ್ಯ ನಡೆ, ಲಿಂಗಪೂಜಾನಿಷ್ಠಾ ಗರಿಷ್ಠತೆ, ಸಮಾಜ ಸೇವಾಕೈಂಕರ್ಯ, ಕಾಯಕ ದಾಸೋಹ ಶರಣ ತತ್ತ್ವದ ಆಚಾರ ಸಂಹಿತೆಗಳು, ಭೌತಿಕ ಸಂಪತ್ತಿಗಿಂತ ಆತ್ಮೀಯ ಸಂಪತ್ತಿನಲ್ಲಿನ ಅಚಲ ವಿಶ್ವಾಸ. ಆತ್ಮೋನ್ನತಿಗಿಂತ ಲೋಕ ಕಲ್ಯಾಣವೇ ನಿರಂತರ ಮಂತ್ರಜಪವಾಗಿ ದುಡಿದ ಕಾರಣ ಶ್ರೀ ಸಿದ್ಧಗಂಗಾ ಮಠದ ಸೇವಾಮಣಿಹ ಲೋಕ ಪೂಜ್ಯವಾಯಿತು. ಬಡ ಮಕ್ಕಳ ಬಂಧು, ಆರ್ತರ ಆಶಾಕಿರಣ, ದೀನದಲಿತರ ಕಾಮಧೇನು, ನಿರಕ್ಷರಕುಕ್ಷಿಗಳಿಗೆ ಅಕ್ಷರ ಬ್ರಹ್ಮರಾಗಿ ನಾಡಿಗೆ ಸುಪರಿಚಿತರಾದರು ಪೂಜ್ಯ ಶ್ರೀಗಳು. ಇಲ್ಲಿ ಪ್ರಸಿದ್ಧ ಸಾಹಿತಿಗಳಾದ ಶ್ರೀ ಎಸ್.ಎಲ್. ಭೈರಪ್ಪನವರ ಪತ್ರಿಕಾ ಹೇಳಿಕೆಯನ್ನು ಇಲ್ಲಿ ಸ್ಮರಿಸಬಹುದು.






ಒಂದು ಪ್ರಬಂಧದಲ್ಲಿ ಬರೆಯುತ್ತಾರೆ 'ನಾನು ಹುಡುಗನಾಗಿದ್ದಾಗ ನಮ್ಮ ಹಳ್ಳಿಗೆ ಶ್ರೀ ಸಿದ್ಧಗಂಗೆಯ ಸ್ವಾಮಿಗಳು ಬಂದಿದ್ದಾಗ ನಮ್ಮ ಗ್ರಾಮದ ಬೀದಿಯಲ್ಲಿ ಊಟ ವಸತಿ ಸೌಕರ್ಯವನ್ನು ಉಚಿತವಾಗಿ ಕೊಟ್ಟು ವಿದ್ಯಾಭ್ಯಾಸ ಮಾಡುವ ಅವಕಾಶವಿದೆ ಅಪೇಕ್ಷೆಯುಳ್ಳವರು ಸಿದ್ಧಗಂಗಾ ಮಠದಲ್ಲಿ ಶ್ರೀಗಳವರನ್ನು ನೇರವಾಗಿ ಕಾಣಬಹುದು' ಎಂದು ಡಂಗೂರ ಸಾರಿಕೊಂಡು ಮುಂದೆ ಬರುವಾಗ ಸ್ವಾಮಿಗಳು ಹಿಂಬದಿಯಲ್ಲಿ ಗ್ರಾಮೀಣ ಜನತೆಯ ಜೊತೆಯಲ್ಲಿ ಮೆರವಣಿಗೆ ಬರುತ್ತಿದ್ದರು. ಇದು ನಾನು ನನ್ನ ಚಿಕ್ಕಂದಿನಲ್ಲಿ ಕಂಡ ದೃಶ್ಯ. ಇದು ಜನಸೇವೆಯಲ್ಲಿ ಕಳಕಳಿಯಿಂದ ಸ್ವಾಮಿಗಳವರು ಮಾಡುವ ಸಾರ್ಥಕಸೇವೆ' ಎಂದು ಇದು ಒಂದು ಉದಾಹರಣೆ. ಇಂಥ ಸಂಗತಿಗಳು ಹಲವು.

ಶ್ರೀ ಸಿದ್ಧಗಂಗಾ ಸಾರ್ವಜನಿಕ ಉಚಿತ ವಿದ್ಯಾರ್ಥಿ ನಿಲಯದಲ್ಲಿ ಪ್ರಾರಂಭದ ತಿಂಗಳಲ್ಲಿ ೧೫ ವಿದ್ಯಾರ್ಥಿಗಳಿಂದ ಆರಂಭಗೊಂಡಿದ್ದು ಸದ್ಯದ ವರ್ಷದಲ್ಲಿ ೯೦೦೦ಕ್ಕೂ ಅಧಿಕ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದಾರೆ. ಆರಂಭದ ವರ್ಷದಿಂದಲೂ ಅಂದರೆ ೧೯೩೦ರಿಂದ ಇಲ್ಲಿಯವರೆಗೆ ೮೮ ವರ್ಷಗಳ ಅವಧಿಯಲ್ಲಿ ಅಧಿಕೃತ ದಾಖಲಾತಿಯ ಪ್ರಕಾರ ೨,೭೬,೫೪೫ ವಿದ್ಯಾರ್ಥಿಗಳು ಶ್ರೀಮಠದಲ್ಲಿ ಅಧ್ಯಯನ ಮಾಡಿದ್ದಾರೆ. ಸಾರ್ವಜನಿಕ ಉಚಿತ ವಿದ್ಯಾರ್ಥಿ ನಿಲಯ ಮತ್ತು ಸಂಸ್ಕೃತ ಪಾಠಶಾಲೆ ಆರಂಭಗೊಂಡು ೧೦೦ ವರ್ಷಗಳು ಪೂರ್ಣಗೊಂಡು ಶತಮಾನೋತ್ಸವ ಆಚರಿಸಿಕೊಳ್ಳುವ ಸಿದ್ಧತೆಯಲ್ಲಿವೆ. ಈ ನೂರು ವರ್ಷಗಳಲ್ಲಿ ಸರಿಸುಮಾರು ೩ ಲಕ್ಷ ವಿದ್ಯಾರ್ಥಿಗಳು ಅವರ ಮಕ್ಕಳು, ಮೊಮ್ಮಕ್ಕಳು, ಮುಮ್ಮೊಕ್ಕಳು ಶ್ರೀಮಠದಿಂದ ವಿದ್ಯಾಭ್ಯಾಸ ಮಾಡಿ ದೇಶದ ಅನಕ್ಷರತೆಯ ನಿರ್ಮೂಲನಕ್ಕೆ ಶ್ರೀಮಠದ ಕೊಡುಗೆ ಅನನ್ಯವಾದದ್ದು. ಶ್ರೀಗಳ ಶ್ರಮ ಅನುಪಮವಾದದ್ದು.

ಪರಮಪೂಜ್ಯರು ೧೦೯ವಸಂತಗಳನ್ನು ಪೂರ್ಣಮಾಡಿ ೧೧೦ನೆಯ ವರ್ಷಕ್ಕೆ ಪಾದಾರ್ಪಣೆ ಮಾಡುವವರಿದ್ದಾರೆ. 'ಶತಾಯುರ್ವೈ ಪುರುಷಃ' ಎಂಬ ಶ್ರುತಿವಾಣಿಯಂತೆ ಭಗವಂತ ಕರುಣಿಸಿದ ಶತವರ್ಷಗಳನ್ನು ಸಾರ್ಥಕಗೊಳಿಸಿ ೧೧೦ನ್ನು ದಾಟಿ ವ್ಯಕ್ತಿಯು ೧೨೦ರ ಪರಮಾಯುವಿನ ಕಡೆ ಶಿವಪಥಗಾಮಿ ಗಳಾಗಿದ್ದಾರೆ. ೧೧೦ ವರ್ಷವಾದರೂ ನಿತ್ಯನೇಮಕ್ಕೆ ಚ್ಯುತಿಯಿಲ್ಲ. ನಿತ್ಯ ನೈಯತ್ತಿಕ ದೈನಂದಿನ ದಿನಚರಿಯಲ್ಲಿ ವ್ಯತ್ಯಾಸವಿಲ್ಲ. ತ್ರಿಕಾಲ ಪೂಜೆ ಪ್ರಸಾದ ಸ್ವೀಕಾರ ಯಾವ ರೋಗ ರುಜಿನಗಳಿಲ್ಲದೆ ನಿರೋಗಿಗಳಾಗಿದ್ದಾರೆ. ದಿನಕ್ಕೆ ಮೂರರಂತೆ ೮೮ ವರ್ಷಗಳಲ್ಲಿ ೯೬,೪೨೬ ಪೂಜೆ ಮಾಡಿದ್ದಾರೆ. ಬೆಳಿಗ್ಗೆ ೩ಗಂಟೆ, ಮಧ್ಯಾಹ್ನ ೧ ಗಂಟೆ ರಾತ್ರಿ ೨ ಗಂಟೆಯಂತೆ ೬ ಗಂಟೆಯಂತೆ ೮೮ ವರ್ಷದಲ್ಲಿ ೧,೮೯,೯೩೦ ಘಂಟೆಗಳ ಕಾಲ ಇಷ್ಟಲಿಂಗಪೂಜೆ ಮಾಡಿದ್ದಾರೆ. ದಿನಕ್ಕೆ ೧ ಸಾವಿರ ಮಂತ್ರ ಜಪದಂತೆ ೮೮ ವರ್ಷಗಳಲ್ಲಿ ೩,೨೧,೭೮,೮೬೫ ಮಂತ್ರಜಪ ಮಾಡಿದ್ದಾರೆ. ದಿನನಿತ್ಯ ಬೆಳಗಿನ ಜಾವ ೨.೩೦ಕ್ಕೆ ಜಾಗೃತರಾಗಿ ೧೫ ನಿಮಿಷಗಳ ಕಾಲ ಶೌಚಾನಂತರ ಶಿವಾನುಭವಿಗಳ ತತ್ವಪಠಣ, ಆನಂತರ ಸ್ನಾನ, ಪ್ರಾರಂಭದಲ್ಲಿ ೩ ತಂಬಿಗೆ ಸಂಮಾರ್ಜನಾಂತರ ಮೂರು ತಂಬಿಗೆ, ಜಲಮಂತ್ರಪೂರ್ವಕ ೩ ತಂಬಿಗೆಯಂತೆ ೯ ತಂಬಿಗೆ ನೀರಿನಲ್ಲಿ ಸ್ನಾನ ಮುಗಿಸಿ ಸುಮಾರು ಮೂರು ಗಂಟೆಗೆ ಪೂಜಾಕೋಣೆಗೆ ಪ್ರವೇಶ. ಸಿದ್ಧಾಸನಾಸೀನರಾಗಿ ಸಂಕಲ್ಪ ಮಾಡಿ ದೇಹನ್ಯಾಸ, ಅಂಗನ್ಯಾಸ, ಕರನ್ಯಾಸನಂತರ ಜಲವಿಭೂತಿ ಮೊದಲಾದ ಶುದ್ಧಿ ನಂತರ ಪ್ರಾರಂಭಿಕ ಇಷ್ಟಲಿಂಗಪೂಜೆ, ಆನಂತರ ಭಸ್ಮಸ್ನಾನ, ಭಸ್ಮ ಅಭ್ಯುಕ್ಷಣ, ಭಸ್ಮಧಾರಣಾನಂತರ ಮಹಾಮಂತ್ರಜಪ, ಆನಂತರ ಅಭಿಷೇಕಾ ಪ್ರಧಾನ ಪೂಜೆ, ಅಂತಿಮ ಅಭಿಷೇಕ ಲಿಂಗಪೂಜಾ ನಂತರ ಪಾದೋದಕ ಸ್ವೀಕಾರ. ಅಷ್ಟಾವರಣ ಷಟ್ಸ್ಥಲಾತ್ಮಕಪೂಜಾ, ನಂತರ ಬೆಳಗಿನ ಪೂಜಾ ಪ್ರಸಾದ, ಒಂದು ಕಪ್ಪು ಬೇವಿನ ಕಷಾಯದೊಂದಿಗೆ ೬ ಗಂಟೆ ಸಮಯಕ್ಕೆ ಪೂಜೆ ಮುಗಿಸಿ ಪೂಜಾನುಗ್ರಹ ನೀಡಲು ಜನಕಲ್ಯಾಣ ಕಾರ್ಯಕ್ರಮಕ್ಕೆ ಕಛೇರಿಗೆ ಆಗಮನ. ಕಾಷಾಯಾಂಬರಧಾರಿ ಗಳಾಗಿ ಅಖಂಡ ಮೂರು ಗಂಟೆಯಲ್ಲಿ ಪೂಜಾನಂದದಲ್ಲಿ ಮಿಂದ ತೇಜಃಪುಂಜಮೂರ್ತಿಯ ಬೆಳಗಿನ ದರ್ಶನ ಅದೊಂದು ಅಪೂರ್ವ ದಿವ್ಯದರ್ಶನ.

ಭಕ್ತಾದಿಗಳ ಈತಿ ಬಾಧೆಗಳು, ಆಧ್ಯಾತ್ಮಿಕಾದಿ ತಾಪತ್ರಯ ಗಳಿಂದುಂಟಾದ ದುಃಖದುಮ್ಮಾನಗಳ ನಿವಾರಣೆಗಾಗಿ ಭಕ್ತರ ಕೋರಿಕೆಗನುಗುಣವಾಗಿ ಮಾಡಿದ ಯಂತ್ರಧಾರಣೆ ಸುಮಾರು ೨೪,೭೧,೫೩೦. ಗೃಹ ನಿವೇಶನಾದಿಗಳಿಗೆ ದಿಗ್ಬಂಧನೆಯ ಯಂತ್ರ ೯೯,೩೬೦. ಪ್ರತಿ ಅಮಾವಾಸ್ಯೆಯಲ್ಲಿ ನಡೆಯುವ ಈ ಕಾರ್ಯದಲ್ಲಿ ಒಂದು ಅಚ್ಚರಿಯೆಂದರೆ ಒಂದು ಅಮಾವಾಸ್ಯೆ ದಿವಸ ಬೆಳಿಗ್ಗೆ ೮.೦೦ ಗಂಟೆಗೆ ಯಂತ್ರ ಕಾರ್ಯ ಆರಂಭಮಾಡಿ ರಾತ್ರಿ ೮.೦೦ ಗಂಟೆಯವರೆಗೆ ಕುಳಿತವರು ೧೨ ಗಂಟೆಗಳ ಕಾಲ ಪೂಜಾಪ್ರಸಾದ ಶೌಚಾದಿಗಳನ್ನು ಮರೆತು ಭಕ್ತರ ಮನೋಭಿಲಾಷೆಗಳನ್ನು ನೆರವೇರಿಸಿದ್ದು ಅಂದು ಸೇರಿದ್ದವರಿಗೊಂದು ಸೋಜಿಗದ ಸಂಗತಿಯಾಗಿತ್ತು.

ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದ ಮೂಲಕ ಗ್ರಾಮಾಂತರ ಜನತೆಯನ್ನು ನವಸಮಾಜ ನಿರ್ಮಾಣ ಕಾರ್ಯಕ್ಕೆ ಅಣಿಗೊಳಿಸಲು ಈವರೆಗೆ ಸುಮಾರು ೧೦೩೦ ನಾಟಕಗಳ ಪ್ರದರ್ಶನವಾಗಿವೆ. ಒಂದು ವರ್ಷದಲ್ಲಿ ಸುಮಾರು ೫೦ ನಾಟಕಗಳು ಪ್ರದರ್ಶನವಾದವು. ಆ ವರ್ಷದಲ್ಲಿ ನಾಲ್ಕು ದಿವಸ ನಿರಂತರ ನಾಟಕ, ಶ್ರೀಗಳವರು ಎಲ್ಲಾ ನಾಟಕಗಳಲ್ಲೂ, ಹಗಲು ರಾತ್ರಿ ಜಾಗರಿದ್ದು ೩ ಪೂಜೆ ಎರಡು ಸಮಾರಂಭಗಳು ರಾತ್ರಿ ನಾಟಕದಲ್ಲಿ ಭಾಗಿಯಾಗಿ ೪–೫ ದಿವಸಗಳು ಮಲಗದೆ ಜನಮಧ್ಯೆಯಿದ್ದದ್ದು ಆ ಅಸಾಮಾನ್ಯ ಚೇತನದ

ದೈವಲೀಲೆಯಲ್ಲವೆ. ಶ್ರೀಗಳ ಸಾಧನೆಯ ೮೮ ವರ್ಷಗಳಲ್ಲಿ ರಾತ್ರಿ ೧೧.೩೦ಕ್ಕೆ ನಿದ್ರೆಗೆ ಜಾರಿ ರಾತ್ರಿ ೨.೩೦ಕ್ಕೆ ಎಚ್ಚರವಾಗಿ ನಿದ್ರಿಸಿದ ಗಂಟೆಗಳು ೧,೨೮,೪೮೦. ಸಮಾಜ ಜಾಗೃತಿಗಾಗಿ ಎಚ್ಚರಿದ್ದ ಸಮಯ ೪,೪೯,೬೮೦ ಗಂಟೆಗಳು.

ಪರಮಪೂಜ್ಯರ ಸಾಧನಾ ಹಾದಿಯ ದಿವ್ಯಪಥದಲ್ಲಿ ಗುರುತಿಸಬಹುದಾದ ಹಲವು ಸಂಗತಿಗಳಲ್ಲಿ ಕೆಲವು ಮಾತ್ರ ವೆಂದು ಭಾವಿಸಬಹುದಾಗಿದೆ. ವೀರಾಪುರದ ಪುಣ್ಯಗ್ರಾಮದ ಪುಟ್ಟ ಬಾಲಕನಾದ ಶಿವಣ್ಣ, ಶ್ರೀ ಶಿವಕುಮಾರಸ್ವಾಮಿಗಳಾಗಿ, ಶ್ರೀ ಶಿವಕುಮಾರಶಿವಯೋಗಿಗಳಾಗಿ, ಶ್ರೀ ಶಿವಸ್ವರೂಪರಾಗಿ ಶ್ರೀ ಶಿವಪರಂಜ್ಯೋತಿಯಾಗಿದ್ದಾರೆ. **'ಯದಾ ಯೋಗೀ ನಿಜಂ ದೇಹಂ ಶಿವಾಯವಿನಿವೇದಯೇತ್ । ತದಾಭವತಿ ತದ್ರೂಪಂ ಶಿವರೂಪಂ ನ ಸಂಶಯಃ' ॥** ಶಿವಯೋಗಿಯು ತನ್ನ ದೇಹವನ್ನು ಶಿವನಿಗೆ ಅರ್ಪಿಸಿ ತಾನೂ ಶಿವರೂಪವೇ ಆಗುವುದರಲ್ಲಿ ಯಾವುದೇ ಸಂಶಯವಿರುವುದಿಲ್ಲ ಎಂಬಂತೆ ಪರಂಜ್ಯೋತಿಯಾಗಿದ್ದಾರೆ. **'ವಿಕಾರ ಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ'** 'ಮನಸ್ಸಿನ ವಿಕಾರಕ್ಕೆ ಕಾರಣಗಳಿದ್ದೂ ಯಾರ ಚಿತ್ತವು ವಿಕೃತಿಯನ್ನು ಹೊಂದುವುದಿಲ್ಲವೋ ಅವರೇ ಧೀರರು' ಎನ್ನುವಂತೆ ಈ ಪ್ರಾಪಂಚಿಕ ಚಿತ್ರವಿಚಿತ್ರದ ಮಧ್ಯೆಯಿದ್ದೂ ಸ್ಥಿತಪ್ರಜ್ಞರಾಗಿ ನಿತ್ಯನಿರಂತರ ಜಂಗಮಮೂರ್ತಿಯಾಗಿ ಪ್ರಣವ ಮಂತ್ರ ಸ್ವರೂಪರಾಗಿ, ಲೋಕದ ಮಧ್ಯೆಯಿದ್ದು ಲೋಕೋತ್ತರರಾದ ಸರ್ವಶೂನ್ಯ ನಿರಾಲಂಬ ಸ್ಥಿತಿಗೇರಿದ ನಿರಂಜನ ನಿರಾಭಾರಿ ಜಂಗಮ ಜ್ಯೋತಿಯಾಗಿದ್ದಾರೆ. ಶ್ರೀ ಸಿದ್ಧಲಿಂಗೇಶ್ವರರು ಹೇಳುವಂತೆ

**ಆಧಾರದ ನಿಚ್ಚಣಿಕೆಯನೇರಿ ನೋಡಲು,**
**ಮಂದರ ಗಿರಿಯೆಂಬ ಮಹಾಪರ್ವತವ ಕಾಣಬಹುದು**
**ಆ ಪರ್ವತದ ತುಟ್ಟತುದಿಯನೇರಿ ನೋಡಲು,**
**ಮಹದಾಕಾಶ ಮಂಟಪವುಂಟು**
**ಆ ಮಂಟಪವ ಹೊಕ್ಕೆಹೆನೆಂದು ವಿಚಾರಿಸಿ ನೋಡಲು**
**ಅಲ್ಲೊಂದು ಸೂಕ್ಷ್ಮದ್ವಾರವುಂಟು.**
**ಆ ಸೂಕ್ಷ್ಮದ್ವಾರ ಕವಾಟವ ತೆರೆದು ನೋಡಲು**
**ಅಲ್ಲಿ ನಿರುಪಾಧಿಕ ಜ್ಯೋತಿ ಬೆಳಗುತಿಪ್ಪುದು**
**ಆ ಬೆಳಗಿನೊಳಗೆ ಅಚಳವಾಗಿ ನಿಂದು ಪರಿಪೂರ್ಣ ಪೂಜೆಯಾಗಿ**
**ತನ್ನನೆ ನಿರಾಳಲಿಂಗಕ್ಕೆ ಪೂಜೆಯ ಮಾಡುವಾತನೆ**
**ಪರಮ ನಿರ್ವಾಣಿಯಯ್ಯಾ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ**

ನಿತ್ಯನಿರಂಜನ ಪ್ರಣವ ಸ್ವರೂಪರಾಗಿ ಶೋಭಿಸುವ ಪರಮಾನಂದ ಪಯೋನಿಧಿಯಲ್ಲಿ ಮಿಂದು ಪರಮಶಾಂತಿಯ ಸಾಮ್ರಾಜ್ಯದಲ್ಲಿ ಲೀಲಾಮಾತ್ರರಾಗಿ ನಿತ್ಯಮುಕ್ತರಾಗಿ ಮನುಕುಲಕ್ಕೆ ಮಂಗಳಾಶೀರ್ವಾದ ನೀಡುವ ಮಂಗಳಮೂರ್ತಿಯಾಗಿದ್ದಾರೆ.



## ಚಿರಂತನ ಚೈತನ್ಯ

ಸಾವಿರ ಸಾವಿರ ಜನರಿಗೆ ದಾಸೋಹ
ಶ್ರೀಕ್ಷೇತ್ರ ಸಿದ್ಧಗಂಗೆ ನಾಡಿಗೆ ಅರ್ಪಿಸಿದ ದಿವ್ಯ ಮಣಿಹ,
ನಿತ್ಯ ನಿತ್ಯ ಅನ್ನದಾನ, ಕ್ಷಣ ಕ್ಷಣ ಜ್ಞಾನದಾನ
ಅನುದಿನ ಅನುಕ್ಷಣ ಆಧ್ಯಾತ್ಮದರ್ಶನ
ನಾಡಿನ ಒಡಲಿಗೆ ಸಂಸ್ಕೃತಿ ಬಾಗಿನ !

ದೀನ ದಲಿತರೆಲ್ಲರ ಅಭ್ಯುದಯದ ಹಾದಿಗೆ
ಶ್ರೀಗುರು ಹಚ್ಚಿದ ಕಾಯಕವೇ ದೀವಿಗೆ;
ಹಳ್ಳಿ ಹಳ್ಳಿ ಜನರಿಗೆ ಬೆಳಕಿತ್ತು ಬಾಳಿಗೆ
ಮುನ್ನಡೆದ ಶ್ರೀಗುರು ಚೈತನ್ಯ ಅಡಿಗಡಿಗೆ !

ನಾಡು ನುಡಿಯ ಉತ್ಥಾನಕೆ ಶ್ರಮಿಸಿದ ಶ್ರೀಗುರುವಿನ
ಗುಣಗಾನ ಮಾಡುತಿರೆ, ಅದೇ ನಮ್ಮ ಸಂಸ್ಕೃತಿಯ ದಿವ್ಯದರ್ಶನ !
ಮಾನವೀಯ ಮೌಲ್ಯಗಳ ಸಾಕಾರಗೊಳಿಸಿದ ಸಂಕಲ್ಪ ಸಾಧನ
ಮಹಾತ್ಮರೆನಿಸಿಹ ನಲ್ಮೆಯ ಶ್ರೀಸ್ವಾಮೀಜಿಯ ಅಂತಃಕರಣ !

ನೊಂದವರ ಬಾಳಿನ ಕಣ್ಣೀರನೊರಸುವ ತಾಯಿಯಂಥ ಶ್ರೀಗುರು
ಶ್ರೀಮನ್ನಿರಂಜನ ಪ್ರಣವ ಸ್ವರೂಪಿ
ಶ್ರೀ ಶಿವಕುಮಾರಸ್ವಾಮಿ ಶ್ರೀಗುರು
ನಮ್ಮ ನಡುವೆ ಜೀವಂತ ನಡೆದಾಡುವ ಕಲ್ಪತರು
ಆಧ್ಯಾತ್ಮದ ಅಧ್ವರ್ಯು ಸಂಸ್ಕೃತಿಯ ರೂವಾರಿ
ಶಿಕ್ಷಣತಜ್ಞ ಶ್ರೀಗುರು
ಅಂದಿಗೂ ಇಂದಿಗೂ ಎಂದೆಂದಿಗೂ ಶಾಶ್ವತ
ಅವರ ಕೀರ್ತಿಸಿರಿ ಹೆಸರು.

– ದೊಡ್ಡರಂಗೇಗೌಡ
ಖ್ಯಾತ ಕವಿಗಳು, ಬೆಂಗಳೂರು





# ೧೧೧ನೆಯ ವರ್ಷಕ್ಕೆ ಶಿವಮುಖಿಯಾಗಿರುವ ಸಿದ್ಧಗಂಗೆಯ ಸಿರಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

– ಡಾ. ಆರ್.ಬಿ. ಚಿಲುಮಿ *

ಶ್ರೀ ಬಸವಾದಿ ಶಿವಶರಣರ ಆಚಾರ ವಿಚಾರಗಳನ್ನು ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಂಡಿರುವ ಮಹಾಪುಣ್ಯ ಪುರುಷರು ಸಿದ್ಧಗಂಗೆಯ ಶ್ರೀಗಳವರು. ಭಕ್ತಿ, ಜ್ಞಾನ, ವೈರಾಗ್ಯ ಅವರಲ್ಲಿ ಬೆರೆತು ಬೇರೆಯಾಗದಂತೆ ನೆಲೆಸಿರುವವು. ಲಿಂಗಾಂಗ ಸಾಮರಸ್ಯವನ್ನು ಪಡೆದ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳು ನಡೆ ಲಿಂಗವಾಗಿ, ನುಡಿ ಲಿಂಗವಾಗಿ ಪರಂಜ್ಯೋತಿಯಂತೆ ಬೆಳಗುತಿರ್ಪರು. ಅವರ ವಿರತಿಭಾವ, ಕರುಣಾದೃಷ್ಟಿ ವಿಶ್ವಮಯವಾದವುಗಳು. ಮನುಜ ಮತ ವಿಶ್ವಪಥ ಸರ್ವರೂ ಸುಖದಿಂದ ಬಾಳಲೆಂಬುದು ಬಯಸಿದವರು. ಇವನಾರವ ಇವನಾರವ ಇವನಾರವ ಎಂದೆನ್ನದೇ ಇವನಮ್ಮವ ಇವನಮ್ಮವ ಎಂಬ ಬಸವಸಿದ್ಧಾಂತವನ್ನು ಅಪ್ಪಿಕೊಂಡು ಒಪ್ಪಿಕೊಂಡು ಬಂದ ಪುಣ್ಯಪುರುಷರು. ಬಸವಣ್ಣನವರ ದಿವ್ಯ–ಭವ್ಯ ವ್ಯಕ್ತಿತ್ವವನ್ನು ಮತ್ತು ಅವರ ಉಪದೇಶಗಳನ್ನು ಇಂದಿನ ೨೧ನೆಯ ಶತಮಾನದಲ್ಲೂ ಜಾರಿಗೊಳಿಸಿದ ಮಹಾ ಪುರುಷರು. ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಡೆ, ಪರುಷ, ನುಡಿ ಪರುಷ, ಇಂತಹ ಪುಣ್ಯ ಮಹಾಪುರುಷರನ್ನು ನೆನೆಯುವುದೇ ನಮಗೆ ದೊರೆತ ಪರಮ ಪಾವನ ಅವಕಾಶ. ಇಂಥ ಪೂಜ್ಯರನ್ನು ಬೆಳಗಿನೊಳಗೆದ್ದು ಸ್ಮರಣೆ ಮಾಡುವುದೇ ನಮಗೆ ದೊರೆತ ಸಿದ್ಧಿ; ಮನದಲ್ಲಿ ನೆನೆಯಬೇಕಾದುದನ್ನು ಕಿವಿಯಿಂದ ಕೇಳಿ ಮನನ ಮಾಡಿಕೊಳ್ಳಬೇಕಾದುದು ನಮ್ಮ ನಿತ್ಯ ಕರ್ತವ್ಯವಾಗಬೇಕು.

ಆಚರಣೆಯಲ್ಲಿ ತನು ಶುದ್ಧತೆ, ಮನ ಶುದ್ಧತೆ ಮತ್ತು ಧನ ಶುದ್ಧತೆಯನ್ನು ಅಳವಡಿಸಿಕೊಂಡು; ಗುರು–ಲಿಂಗ–ಜಂಗಮ ತತ್ತ್ವವನ್ನು ಅರ್ಥೈಸಿಕೊಂಡು 'ತನ್ನ ತಾನರಿದು ತಾನಾರೆಂದು ತಿಳಿದೊಡೆ ತಾನೇ ದೇವ ನೋಡಾ' ಎಂಬ ಬಾಲ ಸಂಗಯ್ಯನವರ ಅಮೂಲ್ಯ ತತ್ತ್ವದ ಪರಾತ್ಪರ ವಸ್ತುವಿನ ದರ್ಶನವು ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರನ್ನು ಕುರಿತೇ ಹೇಳಿದಂತಿದೆ. ಬಾಲಸಂಗಯ್ಯನವರ ಮೇಲಿನ ಮಾತಿಗೆ ಪುಷ್ಟಿ ಎನ್ನುವಂತೆ ಅಕ್ಕಮಹಾದೇವಿಯವರ ವಚನವೊಂದರಲ್ಲಿ ಹೀಗಿದೆ

**ನಡೆ ಶುಚಿ, ನುಡಿ ಶುಚಿ, ತನು ಶುಚಿ**
**ಮನ ಶುಚಿ, ಭಾವ ಶುಚಿ, ಇಂತೀ ಪಂಚ**
**ಪಂಚ ತೀರ್ಥವನ್ನೊಳಗೊಂಡು, ಮರ್ತ್ಯದಲ್ಲಿ**
**ನಿಂದ ನಿಮ್ಮ ಶರಣರ ತೋರಿ ಎನ್ನನುಳುಹಿಕೊಳ್ಳಾ**
**ಚನ್ನಮಲ್ಲಿಕಾರ್ಜುನದೇವಾ !**

ಅಕ್ಕಮಹಾದೇವಿಯವರು ಹೇಳಿದ ಐದು ರೀತಿಯ ಶುಚಿತ್ವವನ್ನು ಅಳವಡಿಸಿಕೊಂಡವರೇ ಶ್ರೀ ಶಿವಕುಮಾರಮಹಾಸ್ವಾಮಿಗಳು. ಅಂತೆಯೇ ಅವರಲ್ಲಿ ಪಂಚ ಪರುಷ ಶಕ್ತಿಗಳು ಕೈವಶವಾಗಿವೆಯೆಂದು ಹೇಳಬಹುದು. ಅವರ ಮನ ಪರುಷ! ಅವರ ಸರ್ವಶಕ್ತಿ, ಸರ್ವವೃತ್ತಿ, ಸರ್ವಭಾವಗಳೆಲ್ಲವೂ ಶಿವಮಯವಾಗಿದ್ದಿವೆ. ಇಷ್ಟಲಿಂಗದಲ್ಲಿಯೇ ಏಕಾಗ್ರ ದೃಷ್ಟಿಯನ್ನಿಟ್ಟು ದೃಷ್ಟಿಯಿಂದ ಲಿಂಗವ ಪೂಜಿಸುವುದರಿಂದ ಅವರ ದೃಷ್ಟಿ ಪರುಷ. ಶುದ್ಧ ಸದ್ಭಾವವಿರುವುದರಿಂದ ಅವರ ಭಾವ ಪರುಷ; ಅಂದರೆ ಆಶೆ–ಆಕಾಂಕ್ಷೆಗಳಿಲ್ಲದ ಸಂಕಲ್ಪ–ವಿಕಲ್ಪರಹಿತವಾದ ಭಾವ. ಮಂತ್ರ ಪಠಣದಿಂದಾದ ವಾಕ್ ಪರುಷ, ಪರೋಪಕಾರಕ್ಕಾಗಿ ಸತ್ಕಾರ್ಯಗಳನ್ನು ಮಾಡುತ್ತಿರುವುದರಿಂದ ಅವರ ಹಸ್ತ ಪರುಷ. ಇಂತೆಲ್ಲ ಪರುಷ ಶಕ್ತಿಗಳ ಪ್ರಭಾವದಿಂದ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕರುಣೆಯಿಂದ ಬೇಡಲು ಬಂದವರಿಗೆ ಬೇಡಿದ್ದನ್ನು ಕೊಡುವ ಕಾಮಧೇನು, ಕಲ್ಪವೃಕ್ಷದಂತಿದ್ದವರು. ಹೀಗೆ ಯಾರಲ್ಲಿ ಅಗಾಧವಾದ ಯೋಗ್ಯತೆಯಿರುವುದೋ ಅವರೇ ದೇವರು, ಭವರೋಗ ವೈದ್ಯರು, ಅವರೇ ಸದ್ಗುರುಗಳು, ಅವರೇ ಜಗದುದ್ಧಾರ ಮಾಡುವವರು, ಅವರೇ ಪರಶಿವನ ಅವತಾರಿಗಳು ಎಂದೆನ್ನಬಹುದು.

ನಡೆದಾಡುವ ದೇವರೆಂದೇ ಕರೆಯಿಸಿಕೊಂಡ ಪೂಜ್ಯ ಶ್ರೀ ಶಿವಕುಮಾರಮಹಾಸ್ವಾಮಿಗಳು ಸಾಕ್ಷಾತ್ ಶಿವನ ಪುತ್ರರೇ! ದೇವಮಾನವರು ಮಾತ್ರ ಮಾನವತೆಯ ಸರ್ವ ಶ್ರೇಷ್ಠವಾದ ಗುಣಗಳನ್ನು ಅಳವಡಿಸಿಕೊಂಡು ಮಾನವತೆಯನ್ನು ಮೀರಿ ಅದಕ್ಕಿಂತಲೂ ಉಚ್ಚ ಪರಂಪರೆಯ ನಡೆನುಡಿಗಳಿಂದ ಕೂಡಿ ಸಕಲ ಜೀವರಾಶಿಗಳಿಗೆ ಲೇಸನೇ ಬಯಸುವುದು ತನ್ನ ಆದ್ಯ ಕರ್ತವ್ಯವೆಂದು ಬಗೆದು ಅದನ್ನು ಆಚರಣೆಯಲ್ಲಿ ತಂದು ಎಲ್ಲ ಮಾನವರಿಗೆ ಬೇಕಾಗುವಂತೆ ನಡೆದವನೇ ದೇವಮಾನವನು. ಹೀಗೆ ಡಾ. ಶ್ರೀ ಶ್ರೀ ಶಿವಕುಮಾರ

* ಸಾಹಿತಿಗಳು, ಧಾರವಾಡ-580003

ಮಹಾಸ್ವಾಮಿಗಳು ಮಾನವ ದೇಹಧಾರಿಗಳಾಗಿದ್ದು; ದೈಹಿಕವಾಗಿ ಎಲ್ಲ ಗುಣಕ್ಕೂ ಅವರ ದೇಹವು ಅಧೀನ ವಾಗಿದ್ದರೂ ಸಹ ದೇವಮಾನವರಾಗಿ ಬೆಳಗುತ್ತಲಿರುವರು. ಅವರು ಅನೇಕ ಅನಾಥ ಮಕ್ಕಳಿಗೆ ರಕ್ಷಣೆ ಒದಗಿಸುತ್ತಿದ್ದಾರೆ. ಅಟವೀಶಿವಯೋಗಿಗಳು ಹೊತ್ತಿಸಿದ ಒಲೆಯು ಒಚಿದೂ ಸಹ ಉರಿಯುತ್ತಿದೆ. ಅನ್ನಕ್ಕೆ ಬರವಿಲ್ಲ ▯ ಜ್ಞಾನಕ್ಕೂ ಬರವಿರದ ಶ್ರೀಮಠವೆಂಬ ಖ್ಯಾತಿಗೆ ಹೆಸರಾದುದು ಸಿದ್ಧಗಂಗೆಯ ಶ್ರೀಮಠ. ಮನುಕುಲದುದ್ಧಾರಕ್ಕಾಗಿ ಅವತರಿಸಿದ ಮಹಾಮಾನವರಾದ ಶ್ರೀಗಳವರು ಮಾನವರಿಗೆ ಉನ್ನತದ ಮೋಕ್ಷದ ಮಾರ್ಗವನ್ನು ತೋರುತ್ತಲಿರುವರು. ಕಣ್ಣಿರುವವರು ಕಣ್ಣಿನಿಂದ ನಿಜ. ಸ್ವರೂಪವನ್ನು ಕಾಣಲೆಂದು ದೀವಿಗೆಗಳನ್ನು ಹೊತ್ತಿಸಿದಂತೆ; ತಮ್ಮ ಅದಮ್ಯ ಶಕ್ತಿಯ ಜೀವಂತ ಸ್ವರೂಪವನ್ನು, ಮಾನವ ಧರ್ಮದ ಮಹತ್ವವನ್ನು ಜಗತ್ತಿಗೆ ತಮ್ಮ ಪ್ರತ್ಯಕ್ಷ ದರ್ಶನದಿಂದ ತೋರುತ್ತಲಿರುವಂತಹ ಮಹಾಪುರುಷರು ಇಂತಹ ದೇವಾಂಶ ಸಂಭೂತರಾದ, ದೇವಮಾನವರಾದ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರನ್ನು ಕಾಣುವುದೊಂದೇ ತಡ ಪ್ರತಿಯೊಬ್ಬನ ಶಿರವು ತನ್ನಿಂದ ತಾನೇ ಬಾಗುತ್ತದೆ. ಲೌಕಿಕ ವೈದ್ಯನು ಶಾರೀರಿಕ ರೋಗವನ್ನು ಕಳೆದರೆ ಮಹಾತ್ಮರಾದ ಶ್ರೀ ಶಿವಕುಮಾರ ಸ್ವಾಮಿಗಳು ಭವರೋಗವನ್ನು ನಿವಾರಿಸಬಲ್ಲ ಅಲೌಕಿಕ ವೈದ್ಯರು. ಈ ಭವರೋಗ ವೈದ್ಯನ ಘನತೆ ಎಂಥದ್ದೆಂದರೆ

**ಭವರೋಗಿಯಾದೆನಗೆ ಜ್ಞಾನವೆಂಬೊಂದೌಷ**
**ಧವನಿತ್ತು ಗುರುವೆಂಬ ವೈದ್ಯನಾ ಕಾಮಾದಿ**
**ವಿವಿಧ ವಿಷಯಂಗಳೆಂಬ ಪಥ್ಯಮಂ**
**ಮಾಡಬೇಡೆಂದೊರೆದು ಕರುಣದಿಂದೆ**
**ಶಿವಪೂಜೆಯೆಂಬ ಘನ ಪಥ್ಯಮಂ ಪಿಡಿಸಿದಂ**
**ಸುವಿರಕ್ತಿಯಿರದಾನ ಪಥ್ಯ ಸೇವನೆಯಿಂದ**
**ಭವರೋಗವಳಿಯದಳಲುವೆ ನನಗೆ ವೈರಾಗ್ಯಮಂ**
**ಕೊಟ್ಟು ಸಲಹು ಶಿವನೆ !**

ಎಂದ ಕವಿರತ್ನ ಚೆನ್ನಕವಿಗಳು (ಹಾ.ಶು. ಪುರಾಣ) ಹೇಳಿರುವಂತೆ ಮಾನವನು ಹುಟ್ಟು-ಸಾವೆಂಬ ಭವರೋಗದಲ್ಲಿ ಸಿಲುಕಿಕೊಂಡಿದ್ದಾನೆ. ಇಂಥ ರೋಗಿಗೆ ಶ್ರೀಗುರುವೇ ವೈದ್ಯನು, ಹಾಗೆಯೇ ಆತನು ನೀಡುವ ಜ್ಞಾನೋಪದೇಶವೇ ಔಷಧ. ಔಷಧ ಕುಡಿದರೂ ಪಥ್ಯವನ್ನು ಮಾಡುವುದು ರೋಗಿಯ ಕರ್ತವ್ಯ. ಆದರೆ ಕಾಮಾದಿ ವಿಷಯಗಳೆಂಬ ಅಪಥ್ಯ ಮಾಡಿದರೆ ಅವನ ಈ ಭವರೋಗವು ವಾಸಿಯಾಗಲಾರದು. ಅದಕ್ಕೋಸುಗ ಈ ಭವರೋಗ ವೈದ್ಯನು ಶಿವಪೂಜೆ ಅಥವಾ ಇಷ್ಟಲಿಂಗ ಪೂಜೆಯೆಂಬ ಘನವಾದ ಪಥ್ಯವನ್ನು ಮಾಡಹಚ್ಚಿ, ವಿಷಯ ವೈರಾಗ್ಯವೆಂಬ ಅನುಪಾನವನ್ನು ಕೊಟ್ಟರೆ ಭವರೋಗವು ನಿವಾರಣೆ ಯಾಗಬಲ್ಲದು. ಆದ್ದರಿಂದಲೇ ಗುರುವು ಮಹಾವೈದ್ಯ ನೆಂತಲೂ, ಮಂತ್ರವನ್ನರಿತ ಸಿದ್ಧಪುರುಷನೆಂತಲೂ ಆಗಿರುವರು. ಈ ಭವಬಂಧನವನ್ನು ಬಿಡಿಸಬಲ್ಲ ವೈದ್ಯನೇ ಗುರುದೇವನು. ಅವನಿಗೇನೆ ಮದ್ದು ಗೊತ್ತು, ಮಂತ್ರವೂ ಗೊತ್ತು. ಹೀಗೆ ಗುರುವು ದೀಕ್ಷೆಯನ್ನಿತ್ತು, ಮಲತ್ರಯಗಳನ್ನು ಕಳೆದು, ಮಾಂಸಮಯ ಶರೀರವನ್ನು ಮಂತ್ರಮಯವನ್ನಾಗಿಸಿ ಷಡಕ್ಷರ ಮಂತ್ರವನ್ನು ಬೋಧಿಸಿ, ಮನವು ಮಹಾಲಿಂಗದಲ್ಲಿ ಕೂಡುವ ಸಾಧ್ಯತೆಯನ್ನು ಕರುಣಿಸುತ್ತಾನೆ. ಅಂತೆಯೇ ಆತನು ಸಿದ್ಧಪುರುಷನು. ವೈಷಯಿಕ ಮದ್ದು ಹಾವಿನಂತಿರುವ ಮನವನ್ನು ಕಚ್ಚಿ ಭವಕ್ಕೆ ಬೀಳಿಸುವುದನ್ನು ತಡೆಯಬಲ್ಲವನು ಶ್ರೀಗುರುವು. ಮದ್ದು-ಮಂತ್ರಗಳನ್ನಿತ್ತು ರಕ್ಷಿಸಬಲ್ಲವನೇ ಸಿದ್ಧ ಶ್ರೀಗುರು. ಆತನ ಕರುಣೆ ಭವಿಯಾದವನಿಗೆ ಅವಶ್ಯವಾಗಿದೆ. ಗುರುಪುತ್ರನಾಗಿ ಶಿವಪೂಜೆಯೆಂಬ ಪಥವನ್ನು ಹಿಡಿದು ವೈರಾಗ್ಯ ಸಾಧನೆಯಿಂದ ಮತ್ತು ಜಪಾನುಷ್ಠಾನದಿಂದ ಮನವನ್ನು ಮಹಾಲಿಂಗದಲ್ಲಿ ಬೆರೆಯಿಸುವ ಶಕ್ತಿಯನ್ನು ಪಡೆಯುವವನಾಗುತ್ತಾನೆ. ಇಂಥ ಸಾಧನೆ-ಸಿದ್ಧಿಯನ್ನು ಪಡೆದವರು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು.

**ಸುರಲೋಕದರಸು ನರಲೋಕವಾಳಲ್ಕೆ**
**ಸುರಲೋಕವೆಲ್ಲ ನರಲೋಕದೊಳದಾದ**
**ಪರಿಗಂಡೆ ಶ್ರೀ ಗುರುವೆ ಕೃಪೆಯಾಗು**

ಎಂದು ಹೇಳಿದ ಮೈಲಾರ ಬಸವಲಿಂಗ ಶರಣರ ಮಾತಿನಂತೆ **'ಸರ್ವಂ ಶಿವಮಯಂ ಜಗತ್'** ಸಕಲ ಜಗತ್ತು ಶಿವಮಯ ವಾಗಿದೆ. ಶಿವನಿಂದ ಉತ್ಪನ್ನವಾದರೂ ಈ ಜಗತ್ತೆಲ್ಲವೂ ಶಿವನ ಒಂದಂಶವೇ ಅಂದ ಮೇಲೆ ಮಾನವನು ಆತನ ಒಂದಂಶನು ಅಥವಾ ಅಂಗನು. ಅದು ಕಾರಣ ಮಾನವನು ತನ್ನ ಪುಣ್ಯಮಯವಾದ ಶರೀರದಿಂದ ಮಹಾದೇವನನ್ನು ಕಾಣಬಲ್ಲನು. ಕೊನೆಗೆ ಅವನೇ ತಾನಾಗಬಲ್ಲನು. **'ಶರೀರ ಮಾಧ್ಯಂ ಖಲು ಧರ್ಮ ಸಾಧನಂ'** ಎಂಬ ಕಾಳಿದಾಸನ ವಾಕ್ಯೋಕ್ತಿಯಂತೆ ಶರೀರವೇ ಧರ್ಮಾಚರಣೆಗೆ ಪ್ರಥಮ ಸಾಧನ ಎಂಬುದಾಗಿ ಹೇಳಿದ್ದು ಇದೇ ಅರ್ಥದಲ್ಲಿಯೇ. ಆದುದರಿಂದ ಮಾನವರಾದ ನಾವು ಸಕಲ ಪ್ರಾಣಿಗಳಲ್ಲಿಯೇ ಶ್ರೇಷ್ಠವಾದ ಪ್ರಾಣಿ. ಇಂಥ ಪುಣ್ಯಮಯ ಶರೀರವನ್ನು ಧರ್ಮಾಚರಣೆಯನ್ನು ಮಾಡಿ ಸಾರ್ಥಕಪಡಿಸಿಕೊಳ್ಳಬೇಕಾಗಿದೆ. ಕೇವಲ ಡಸ್ಟ್‌ಬಿನ್‌ನಂತೆ ಶರೀರದೊಳಗೆ ಏನೆಲ್ಲಾ ಹಾಕಿಕೊಂಡು ಹಾಳು ಮಾಡಿಕೊಳ್ಳಲು ಬೇಡಿರೆಂದಿದ್ದಾರೆ ಮಹಾತ್ಮರು! ಚಾಮರಸ ಕವಿಯೂ ತನ್ನ ಪ್ರಭುಲಿಂಗಲೀಲೆಯಲ್ಲಿ ಹೇಳಿರುವಂತೆ





**ಯೋಗ ಯೋಗ್ಯರು ಯೋಚಿಸುತ ಭೂ**
**ಭಾಗದಲಿ ಮಾನವ ಶರೀರಿಗಳಾಗಿ**
**ಸಾಧಿಸಿ ನಿಜವನರಿವನು ಗಿರಿಜೆ ಕೇಳೆಂದ**

ಎಂದು ಪಾರ್ವತಿಗೆ ಯೋಗವನ್ನು ಬಲ್ಲಿದ ಯೋಗಿಗಳು ಸಹ ಭೂವಲಯದಲ್ಲಿ ಮಾನವ ಶರೀರದಿಂದಲೇ ಭಕ್ತಿಮಾರ್ಗವನ್ನು ಸಾಧಿಸಿ ನಿಜವನ್ನು ಅರಿಯುತ್ತಾರೆಂದು ತಿಳಿಸಿದ್ದಾರೆ. ಸಕಲ ಜೀವರಾಶಿಗಳಿಗೆ ದುರ್ಲಭವಾದ ಮಾನವ ಶರೀರವನ್ನು ಪಡೆದ ಮೇಲೆ ಸನ್ಮಾರ್ಗದಲ್ಲಿ ನಡೆದು ಯೋಗ್ಯನಾಗಬೇಕು.

**ಸತ್ಯವ ನುಡಿವುದೇ ದೇವಲೋಕ**
**ಮಿಥ್ಯವ ನುಡಿವುದೇ ಮರ್ತ್ಯಲೋಕ**
**ಆಚಾರವೇ ಸ್ವರ್ಗ ಅನಾಚಾರವೇ ನರಕ**

ಎಂಬುದಾಗಿ ಬಸವಣ್ಣನವರು ತಿಳಿಸಿದಂತೆ ನಡೆ-ನುಡಿಗಳೊಂದಾದರೆ ಸುರಲೋಕವು ಭೂಲೋಕ ದೊಳಗಿರುವುದು. ಅಲ್ಲಿ ಸಲ್ಲುವವರು ಇಲ್ಲಿಯೂ ಸಲ್ಲುವರು. ದೇವಲೋಕದ ಶಿವನ ಅಂಶವಾದ ಮಾನವನು ಸನ್ಮಾರ್ಗದಲ್ಲಿ ನಡೆದರೆ ಅವನೇ ದೇವನಾಗುವನು. ಅವನಿರುವ ನರಲೋಕವು ಸುರಲೋಕವಾಗುವುದು. ಶ್ರೀಗುರು ಕರುಣೆಯನ್ನು ಪಡೆದ ಈ ದೇಹವು ಸುಂದರ ನಡೆಯಿಂದ ಸುರಲೋಕವೆನಿಸುವುದು.

**'ಸತ್ಯಂ ಶಿವಂ ಸುಂದರಂ'** ಎಂಬ ತತ್ತ್ವಯುಕ್ತ ನಾಗುವಲ್ಲಿ ಸಂದೇಹವಿಲ್ಲದ ಕಾರಣ ಸದಾಚಾರ, ಸನ್ಮಾರ್ಗದಿಂದ ನಡೆದು ಈ ಮಾನವ ಜೀವನದಲ್ಲಿ ಕಾಣದ ಸುರಲೋಕವನ್ನು ಅಳವಡಿಸಿಕೊಂಡು ದೇವನಾಗಬಹುದು. ಯಾವ ಮಹಾತ್ಮನಾದರೂ ದೇವಲೋಕವನ್ನು ತರಲಾರನು. ಆದರೆ ಈ ಲೋಕವನ್ನೇ ತಮ್ಮ ಆದರ್ಶದಿಂದ, ಉಪದೇಶದಿಂದ ಸನ್ಮಾರ್ಗ ತೋರಿ ಸ್ವರ್ಗ ಸದೃಶವನ್ನಾಗಿ ಮಾಡುತ್ತಾರೆ. ಇಂಥ ಪುಣ್ಯಪುರುಷರ ಜೀವನದ ಆದರ್ಶವನ್ನು ಅನುಸರಿಸಿ ನಡೆದರೆ ಅವನ ಜೀವನ ಸುರಲೋಕವಾದಂತಾಗುವುದು. ನಾವಿಂದು ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗುರುಮಾರ್ಗ ದರ್ಶನದಲ್ಲಿ ನಡೆಯುವ ಛಲ ತೊಡಬೇಕು. ಇಂದು ಅವರೇ ನಮಗೆ ಮಾರ್ಗದರ್ಶಕರು, ಶ್ರೇಷ್ಠ ಗುರುವಂದ್ಯರು, ಪೂಜ್ಯರು. ಗುರುವೇ ನಿಮ್ಮ ನಡೆ-ನುಡಿಯ ಆದರ್ಶದಿಂದ ನಿತ್ಯವಾದ ಸ್ವರ್ಗಸುಖವನ್ನು ಕಾಣುವ ಪರಿಯನ್ನು ತೋರಿ ರಕ್ಷಿಸು ಎಮ್ಮನು ಅನವರತವೆಂದು ಪ್ರಾರ್ಥಿಸಿಕೊಳ್ಳೋಣ. ವಿಶ್ವಗುರು ಬಸವಣ್ಣನವರೆಂದಂತೆ -

**ನೀನೊಲಿದರೆ ಕೊರಡು ಕೊನರುವುದಯ್ಯಾ**
**ನೀನೊಲಿದರೆ ಬರಡು ಹಯನಹುದಯ್ಯಾ**
**ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ**
**ನೀನೊಲಿದರೆ ಸಕಲ ಪಡಿ ಪದಾರ್ಥಗಳು**
**ಇದರಲಿಪ್ಪನು ಕೂಡಲಸಂಗಮದೇವಾ**

ಎಂದಂತೆ ನಡೆದಾಡುವ ದೇವರು. ಶಿವಸ್ವರೂಪಿಗಳಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಲ್ಲಿ ಶ್ರದ್ಧೆ, ಭಕ್ತಿ, ವಿಶ್ವಾಸಗಳಿಂದ ನಡೆದುಕೊಳ್ಳೋಣ. ಇಂತಿದ್ದರೆ ನಮಗೆ ಆಶೀರ್ವದಿಸಿದಿರುವರೇ! ಇಂತಹ ಮಹಾಪುರುಷರ ಕುರಿತು ಅದೆಷ್ಟು ಬಣ್ಣಿಸಿದರೂ ಕಡಿಮೆಯೇ ಸರಿ! ಅವರು ಲೋಕದಂತೆ ಬಾರರು, ಲೋಕದಂತೆ ಇರರು. ಲೋಕದಂತೆ ಹೋಗರು ನೋಡಯ್ಯ! ಪುಣ್ಯದಂತೆ ಬಪ್ಪರು, ಜ್ಞಾನದಂತೆ ಇಪ್ಪರು, ಮುಕ್ತಿಯಂತೆ ಹೋಗರು ನೋಡಯ್ಯಾ; ಉರಿಲಿಂಗದೇವಾ ನಿಮ್ಮ ಶರಣರು ಉಪಮಾತೀತರಾಗಿ ಉಪಮಿಸಬಾರದು - ಎಂದ ಶರಣ ವಾಣಿಯಂತೆ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಿದ್ದಾರೆ. ಅವರನ್ನು ಕಂಡು ದರ್ಶನ ಪಡೆದು ಪುನೀತರಾಗೋಣ ಬನ್ನಿ ಸಿದ್ಧಗಂಗೆಯ ಶ್ರೀಮಠಕೆ, ಅವರಿಂದ ಕೃಪಾಶೀರ್ವಾದ ಪಡೆಯುದಕೆ !!

## ಶ್ರೀವಾಣಿ

ಪ್ರಜಾಪ್ರಭುತ್ವದಲ್ಲಿನ ನಾಯಕ ವರ್ಗವು ಪ್ರಾಮಾಣಿಕರಾಗಿಯೂ ಪರಿಪೂರ್ಣತೆಯುಳ್ಳವರಾಗಿಯೂ; ಸೂಕ್ಷ್ಮ ಗ್ರಾಹಕಶಕ್ತಿಯುಳ್ಳವರಾಗಿಯೂ,
ಸೇವಾಮನೋಭಾವವುಳ್ಳವರಾಗಿಯೂ, ದೀನದಲಿತ ವರ್ಗದಲ್ಲಿ ಅನುಕಂಪ. ಉಳ್ಳವರಾಗಿಯೂ ಇದ್ದು ಸತ್ಯಶುದ ನಿಷ್ಠೆ ತತ್ತ್ವಗಳಿಗೆ ತಮಗೆ ತಾವೇ
ಸಮರ್ಪಿಸಿ ಕೊಂಡವರಾಗಿರಬೇಕು. ಇವೆಲ್ಲಕ್ಕೆ ಮಿಗಿಲಾಗಿ ಮಾನವೀಯ ಅನುಕಂಪ, ಮನುಷ್ಯ ಸಹಜವಾದ ಗುಣಗಳನ್ನು ಅಳವಡಿಸಿಕೊಂಡಿರಬೇಕು.
ಇಂತಹ ಸರ್ವೋತ್ತಮ ವಿವೇಕ ಪೂರ್ಣ ವ್ಯಕ್ತಿಗಳ ಆಳ್ವಿಕೆಯನ್ನು ದೇಶಕ್ಕೆ ದೊರಕಿಸಿ ಕೊಡುವುದು ವಿದ್ಯಾವಂತ ವರ್ಗದ ಆದ್ಯಕರ್ತವ್ಯವಾಗಿದೆ.

★ ★ ★

ಇತ್ತೀಚಿನ ದಿನಗಳಲ್ಲಿ 'ಆಲಸ್ಯ' ಜೀವನ ನಾಗರಿಕತೆಯ ಲಕ್ಷಣವಾಗುತ್ತಿದೆ. ಸದ್ಭಾವನೆಯ ಬದುಕು ಎಂದರೆ ಕ್ರಿಯಾಶೀಲ ಜೀವನ ಅಪರೂಪ
ವಾಗುತ್ತಿದೆ. ಇದರಿಂದಾಗಿ ಕುಟುಂಬಗಳು, ಸಮಾಜ, ದೇಶ ದಾರಿದ್ರ್ಯದ ಕಹಿಯನ್ನುಣ್ಣುವಂತಾಗಿದೆ. ಜನನಾಯಕರು ಕೇವಲ 'ಓಟು ಬ್ಯಾಂಕು'ಗಳ
ಕಡೆ ಗಮನ ವಿಟ್ಟಿರುವುದೇ ಈ ಎಲ್ಲಾ ದುರಂತಗಳಿಗೆ ಕಾರಣವಾಗಿದೆ.



# ನನ್ನ ಶಿಕ್ಷಾ – ದೀಕ್ಷಾ – ಮೋಕ್ಷಗುರು

– ಪ್ರೇಮಾ ಮಲ್ಲಣ *

ಮಣಿಯದಿಹ ಮನವೊಂದು ಸಾಧಿಸುವ ಹಠವೊಂದು, ನಿಜದ ನೇರಕೆ ನಡೆವ ನಿಶ್ಚಲತೆಂಬೊಂದು, ಅನ್ಯಾಯಕೆಂದೆಂದೂ ಬಾಗದೆಚ್ಚರವೊಂದು, ಅಭೀಃ ಅಭೀಃ ಎಂಬ ತಾರಕ ವಾಕ್ಯ, ನಾಡಿಯನು ನಡೆಸುತಿರೆ, ಬಾಳನು ತಿದ್ದುತಿರೆ ನಡೆ ಮುಂದಕ್ಕೆನ್ನುತ ಕೂಗುತಿವೆ – ನುಡಿಸುತ್ತಿವೆ" ವಿ.ಸೀ. ಈ ಕವನದ ಮನೋಜ್ಞತೆಯನ್ನು ನಾನು ಕಂಡದ್ದು ಶ್ರೀ ಸಿದ್ಧಗಂಗಾ ಸ್ವಾಮೀಜಿಯವರ ನಡೆ-ನುಡಿಯಲ್ಲಿ, ಆಚಾರ ವಿಚಾರದಲ್ಲಿ, ಮನೋನಿಗ್ರಹದಲ್ಲಿ. ಒಂದೇ ಮಾತಿನಲ್ಲಿ ಹೇಳುವುದಾದರೆ ಅವರ ನಿಜದನೇರಕ್ಕೆ ನಡೆಯುವ ನಿಶ್ಚಲತೆಯಲ್ಲಿ. ಸ್ವಾಮೀಜಿಯವರ ವ್ಯಕ್ತಿ ವೈಶಿಷ್ಟ್ಯಗಳು ಹಲವು ಬಗೆಯವು. ಸೇವಾ ಕ್ಷೇತ್ರಗಳೂ ಹಲವು. ಹತ್ತಾರು, ಇವೆಲ್ಲವೂ ಒಟ್ಟಾದರೆ ನಮಗೆ ಕಾಣುವುದೊಂದೇ ರೂಪ, ಜ್ಞಾನ-ಸುಜ್ಞಾನ ಸ್ವರೂಪ, ಗುರುಬ್ರಹ್ಮ-ಗುರುವಿಷ್ಣು, ಗುರುದೇವೊ ಮಹೇಶ್ವರರಾಗಿ.

ಡಿ.ವಿ.ಜಿ. ಯವರು ಹೇಳುತ್ತಾರೆ **'ನೂರಾರು ಮತಗಳಿಹವು ಲೋಕದುಗ್ರಾಣದಲಿ ಆರಿಸಿಕೊ ನಿನಗೊಪ್ಪುವದನುದರೊಳ್....'** ಅವರ ಮಾತಿನಂತೆ ನಾನು ಸ್ವಾಮೀಜಿಯವರನ್ನು ಕಂಡುಕೊಂಡದ್ದು ಒಬ್ಬ ಮಹಾನ್ ಶಿಕ್ಷಕರನ್ನಾಗಿ, ಏಕೆಂದರೆ ನನಗೆ ೬-೭ ವರ್ಷದ ಬಾಲಕಿಯಾಗಿದ್ದಾಗಲೇ ಸ್ವಾಮೀಜಿಯವರ ದರ್ಶನ ಭಾಗ್ಯ ದೊರಕಿತ್ತು. ಅವರಲ್ಲಿದ್ದ 'ಶಿವಶಕ್ತಿ' ನನ್ನ ಕೈಹಿಡಿದಿತ್ತು ಎಂದು ನನ್ನ ಭಾವನೆ. ಅಂದಿನ ಸಂದರ್ಭವನ್ನು ನಾನು ಮರೆತಿಲ್ಲ, ೬೬-೬೭ ವರ್ಷಗಳ ಹಿಂದಿನ ಘಟನೆ ಹೀಗಿದೆ –

ಆಗ ನಾನು ಟಿ.ಬೇಗೂರಿನ ಸರ್ಕಾರಿ ಶಾಲೆಗೆ ಸೇರಿದ್ದೆ. ಹೆದ್ದಾರಿಯ ಪಕ್ಕದಲ್ಲೇ (ಈಗಿನ ಬಿ.ಹೆಚ್. ರಸ್ತೆ) ಶಾಲೆ, ಅಂದು ಶ್ರೀ ಶಿವಕುಮಾರಸ್ವಾಮಿಗಳು ಈ ಮಾರ್ಗವಾಗಿ ಪಯಣಿಸುತ್ತಾರೆಂದು ತಿಳಿದ ಶಿಕ್ಷಕರು ನಮ್ಮನ್ನೆಲ್ಲ ರಸ್ತೆಯ ಬದಿಯಲ್ಲಿ ಸಾಲಾಗಿ ನಿಲ್ಲಿಸಿದ್ದರು. ಅವರ ಕಾರು ಹಾಯ್ದು ಹೋಗುವಾಗ ಕೈಮುಗಿಯುತ್ತಾ ನಿಂತಿರುವಂತೆ ತಿಳಿಸಿದ್ದರು, ಊರಿನ ಕೆಲವು ಜನರೂ ಇದ್ದರು. ಕಾರು ನಮ್ಮ ಶಾಲೆಗೆ ಹತ್ತಿರವಾಗುತ್ತಿತ್ತು, ಆ ಊರಿನ ಕುರುಡ ಶಿವಣ್ಣ ಎಂಬುವವನು ರಸ್ತೆಯ ಮಧ್ಯಭಾಗಕ್ಕೆ ಓಡಿದ, ಅವನನ್ನು ಹಿಡಿಯಲು ಜನ ಗುಂಪಾಗಿ ಓಡಿದರು, ವಿದ್ಯಾರ್ಥಿಗಳು ಶಿಸ್ತು ಮುರಿದಿತ್ತು. ಕಾರಿನ ಬಳಿಗೆ ನಾವು ಓಡಿದೆವು. ಕಾರುನಿಂತಿದ್ದು ಸ್ವಾಮೀಜಿಯುವರ ಮುಖಾರವಿಂದ ಕಾಣಿಸುತ್ತಿತ್ತು, ಶಿಕ್ಷಕರೊಬ್ಬರು ಪುಟ್ಟಮಕ್ಕಳನ್ನು ಮುಂದಕ್ಕೆ ಕರೆದೊಯ್ದರು, ನಾವೆಲ್ಲ ಅವರನ್ನು ನೋಡಿ ಕಣ್ತುಂಬಿಕೊಂಡೆವು. ಕರಜೋಡಿಸಿದೆವು. ನಮಸ್ಕಾರ ಹೇಳಿದೆವು, ಸ್ವಾಮೀಜಿಯವರ ದರ್ಶನ ಭಾಗ್ಯದೊಂದಿಗೆ ಭವಿಷ್ಯದ ಜೀವನಕ್ಕೆ ಸಂಸ್ಕಾರವೂ ದೊರೆತಿತ್ತು, ಕುರುಡ ಶಿವಣ್ಣನಿಗೆ ಸ್ವಾಮೀಜಿ ಸ್ವಲ್ಪ ಹಣ ಕೊಡಿಸಿದರೆಂಬ ಮಾತು ನೆನಪಿದೆ.

ನನ್ನ ತಂದೆ (ಟಿ.ಎಸ್. ರಾಜಶೇಖರಪ್ಪ)ಯ ತಾಯಿ ವೀರಮ್ಮನವರು ಸಿದ್ಧಗಂಗಾ ಶ್ರೀಗಳವರಿಂದ ದೀಕ್ಷೆ ಪಡೆದಿದ್ದರು. ಅವರ ಆಚಾರ-ವಿಚಾರಗಳೆಲ್ಲೆಲ್ಲ ಸ್ವಾಮೀಜಿಯುವರ ಪ್ರಭಾವವಿತ್ತು. ಅಜ್ಜಿಗೆ ೧೦೦ ವರ್ಷಗಳಾಗಿದ್ದವಂತೆ. ಅವರು ಅಂತ್ಯದಲ್ಲಿ ಸಿದ್ಧಗಂಗಾ ಶ್ರೀಗಳಿಗೆ ನಮಿಸುತ್ತಾ ಸಿದ್ಧಗಂಗೆಯ ಜಲವನ್ನು ಬಾಯಿಗೆ ಹಾಕಿಸಿಕೊಂಡು ನರಳದೆ-ಕೊರಗದೆ ಪ್ರಾಣಬಿಟ್ಟರು. ಮಠದ ವತಿಯಿಂದ ನಡೆಯುತ್ತಿದ್ದ ಅನ್ನ ದಾಸೋಹದ ಬಗ್ಗೆ ಶಾಲಾ ಕಾಲೇಜುಗಳಲ್ಲಿನ ವಿದ್ಯಾಭ್ಯಾಸದ ಬಗ್ಗೆ ಕೇಳುತ್ತಲೇ ಭಕ್ತಿಭಾವ ತುಂಬಿಕೊಂಡಿದ್ದ ನನಗೆ ಸ್ವಾಮೀಜಿಯವರು ಆದರ್ಶ ಮೂರ್ತಿಗಳಾದರು. ಅವರು ತರಗತಿಗಳಿಗೆ ಹೋಗಿ ಇಂಗ್ಲೀಷ್ ಬೋಧಿಸುತ್ತಿದ್ದ ವಿಚಾರಗಳನ್ನೆಲ್ಲಾ ತಿಳಿದು 'ಸ್ವಾಮೀಜಿ ಶಿಕ್ಷಕ'ರಾಗಿ ಕಲಿಸುತ್ತಿದ್ದ ರೀತಿ-ನೀತಿಗಳು ನನ್ನ ಶಿಕ್ಷಕ ವೃತ್ತಿಗೆ ನಾಂದಿಯಾಯಿತು ಎನಿಸುತ್ತದೆ. ಸ್ವಾಮೀಜಿ ಶಿಕ್ಷಕರಿಗೆ ಒಂದು ಚುಂಬಕ ಶಕ್ತಿ ಇದ್ದಂತೆ. ಅಲ್ಲಿ ಓದಿದ ಅನೇಕರು ಶಿಕ್ಷಕರಾಗಿ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡಿದ್ದಾರೆ.

ಸ್ವಾಮೀಜಿಯುವರು ತರಗತಿಯ ಒಳಗಾಗಲಿ, ಹೊರಗಾಗಲಿ ಬೋಧಿಸಿದ್ದು ಸಾಟಿಯಿಲ್ಲದ ಜ್ಞಾನ. ಇದು ಭೌತಿಕ, ಆಧ್ಯಾತ್ಮಿಕ ಜೀವನಕ್ಕೆ ಪ್ರೇರಕವಾದದ್ದು. ಆದರೆ ಕಲಿಕೆಯು ಉದ್ದೇಶಪೂರ್ವಕವಾಗಿದ್ದರೆ ಮಾತ್ರ ನಮ್ಮಲ್ಲಿ ಸೃಜನಶೀಲತೆ ಅರಳುತ್ತದೆ, ಸೃಜನಶೀಲತೆ ಅರಳಿದರೆ ಉತ್ತಮ

* 'ಶಾಂಭವಿ' ೩ನೇ ಕ್ರಾಸ್, ಸೋಮೇಶ್ವರಪುರಂ, ತುಮಕೂರು





ಚಿಂತನೆಗಳು ಉದ್ಭವಿಸುತ್ತವೆ, ಚಿಂತನೆ ಚಿರಂತನವಾದಾಗ ನೈತಿಕತೆ ಮೂಡುತ್ತದೆ, ಜ್ಞಾನ ಬೆಳಗುತ್ತದೆ, ಶ್ರೀಗಳಲ್ಲಿ ಬೆಳಗುತ್ತಿರುವ ಜ್ಞಾನವೇ ದೇಶ ಭಕ್ತಿಯಾಗಿ ಮನುಕುಲದ ಉದ್ಧಾರಕ್ಕಾಗಿ ಕರುಣೆ, ಶಾಂತಿ, ಕ್ಷಮೆ, ಪ್ರೇಮ, ವಾತ್ಸಲ್ಯ ಮುಂತಾದ ದೈವೀಗುಣವಾಗಿಸುತ್ತದೆ. ಅದು ನಮಗೆ ಲಭ್ಯವಾಗುತ್ತದೆ. ಶಿಕ್ಷಕರಿಗೆ ಸಮಯ ಪರಿಪಾಲನೆ ಅತಿಮುಖ್ಯ. ಇದನ್ನು ಸ್ವಾಮೀಜಿಯವರನ್ನು ನೋಡಿ ಕಲಿಯಬೇಕು, ಸಭೆ-ಸಮಾರಂಭಗಳಿಗೆ ಶ್ರೀಗಳನ್ನು ಕರೆಯುತ್ತಾರೆ, ಆದರೆ ಸಿದ್ಧತೆಯೇ ಪೂರ್ಣಗೊಂಡಿರುವುದಿಲ್ಲ. ಇದನ್ನು ತಿಳಿದ ಶ್ರೀಗಳು ತಮ್ಮೊಂದಿಗೆ ತಂದಿರುವ ಪುಸ್ತಕವನ್ನು ಓದುತ್ತಾ, ಒಮ್ಮೊಮ್ಮೆ ಕಾರಿನಲ್ಲೇ ಕುಳಿತು ಓದಿನಲ್ಲಿ ತಲ್ಲೀನರಾಗಿರುತ್ತಾರೆ, ಇದರಲ್ಲಿ ಸಮಯವನ್ನು ವ್ಯರ್ಥ ಮಾಡಬೇಡಿ ಎಂಬ ಸಂದೇಶವಿದೆಯಲ್ಲವೇ !

ಹೆಚ್ಚಿನ ವಿದ್ಯೆ ಶಿಕ್ಷಕರ ಘನತೆಯನ್ನು, ಆತ್ಮಬಲ ಹಾಗೂ ಆತ್ಮಗೌರವವನ್ನು ಹೆಚ್ಚಿಸುತ್ತದೆ. ೫೫-೬೦ರ ಕಾಲಘಟ್ಟದಲ್ಲಿ ಹೆಣ್ಣು ಮಕ್ಕಳಿಗೆ ಹೆಚ್ಚಿನ ವಿದ್ಯಾಭ್ಯಾಸಬೇಕಿಲ್ಲ ಎಂಬ ನಂಬಿಕೆಯಿದ್ದಾಗ ನನ್ನಂಥ ಕೆಲವು ಪ್ರಾಥಮಿಕ ಶಾಲಾ ಶಿಕ್ಷಕಿಯರು ವಿಶ್ವವಿದ್ಯಾಲಯದ ಶಿಕ್ಷಣ ಪಡೆಯುವುದಕ್ಕಾಗಿ ಹಪಹಪಿಸುತ್ತಿದ್ದೆವು. ನಮ್ಮ ಜೊತೆಗೆ ಕೆಲವು ಶಿಕ್ಷಕರೂ ಸೇರಿ ತೀರ್ಮಾನಿಸಿ ಸ್ವಾಮೀಜಿಯವರ ಬಳಿಗೆ ತುಮಕೂರಿನಿಂದ ಎರಡು ಜಟಕದಲ್ಲಿ ಹೋದೆವು. ಸ್ವಾಮೀಜಿ ಹೊಲದಲ್ಲಿ ಕೆಲಸ ಮಾಡುತ್ತಿದ್ದರು. ನಾವೆಲ್ಲ ಒಟ್ಟಿಗೆ ಅವರ ಪಾದಗಳಿಗೆ ನಮಿಸಿ ನಮ್ಮ ಶಿಕ್ಷಣದ ಬಗ್ಗೆ ಹೇಳಿಕೊಂಡು ತಾವು ಕೃಪೆದೋರಿ ಪದವಿ ಶಿಕ್ಷಣ ಪಡೆಯಲು ಸಂಜೆ ಕಾಲೇಜನ್ನು ತೆರೆದು ನಮ್ಮನ್ನು ಆಶೀರ್ವದಿಸಬೇಕೆಂದು ಪ್ರಾರ್ಥಿಸಿಕೊಂಡೆವು. ಸ್ವಾಮೀಜಿ ಒಂದು ನೂರು ಜನ ವಿದ್ಯಾರ್ಥಿಗಳಾದರೆ ಪ್ರಯತ್ನಿಸೋಣವೆಂದು ಅಶ್ವಾಸನೆಯಿತ್ತರು, ನಾವುಗಳು ಶಿಕ್ಷಕರ ಮಾಸಿಕ ಸಭೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿ ಆಸಕ್ತಿಯುಳ್ಳವರು ಸಹಿ ಮಾಡುವಂತೆ ಕೇಳಿಕೊಂಡೆವು. ನೂರು ಮಂದಿಯ ಸಹಿ ಪಡೆಯುವುದರಲ್ಲಿ ಸಫಲರಾದೆವು. ಅದೇ ಪಟ್ಟಿಯನ್ನು ಸ್ವಾಮೀಜಿಯವರಿಗೆ ಸಲ್ಲಿಸಿದೆವು. ೧೯೬೭ ಸೆಪ್ಟೆಂಬರ್ ಹೊತ್ತಿಗೆ ಕಾಲೇಜು ಪ್ರಾರಂಭವಾಯಿತು.

ತುಮಕೂರಿನಲ್ಲಿ ಮೊಟ್ಟಮೊದಲ ಸಂಜೆ ಕಾಲೇಜು ಸಂಜೆ ೬-೦೦ ಗಂಟೆಯಿಂದ ರಾತ್ರಿ ೯-೦೦ ಗಂಟೆವರೆಗೆ ನಡೆಯಲು ಪ್ರಾರಂಭವಾಯಿತು, ಸ್ವಾಮೀಜಿಯವರು ಉದ್ಘಾಟನಾ ಸಮಾರಂಭದಲ್ಲಿ ಕೆಲ ಮಾತುಗಳನ್ನು ಶಿಕ್ಷಕರಿಗಾಗಿ ಹೇಳಿದ್ದು ನೆನಪಿನಲ್ಲಿ ಉಳಿದಿವೆ. **'ಈ ಜಗತ್ತಿನಲ್ಲಿ ಶಿಕ್ಷಕ ವೃತ್ತಿಗಿಂತ ಸಮಾಜಕ್ಕೆ ಉಪಯುಕ್ತವಾದ ಕೆಲಸ ಮತ್ತೊಂದಿಲ್ಲ'**, ಶಿಕ್ಷಕ ವೃತ್ತಿಯನ್ನು ಜೀವನಾಧಾರವೆಂದು ಮಾತ್ರ ಪರಿಭಾವಿಸದೆ ವಿದ್ಯಾರ್ಥಿಗಳನ್ನು ರಾಷ್ಟ್ರಭಕ್ತಿ ಪ್ರೇರಿತ ಸತ್‌ಪ್ರಜೆಗಳನ್ನಾಗಿ ರೂಪಿಸಲು ಪ್ರೇರೇಪಿಸಿ, ಈಗ ನೀವು ಮೊದಲು ವಿದ್ಯಾರ್ಥಿಗಳಾಗಿ ಸದ್ಗುಣಗಳನ್ನು ರೂಪಿಸಿಕೊಳ್ಳಿರೆಂದರು. ಅವರ ಮಾತುಗಳ ಪ್ರಭಾವ ಎಲ್ಲರ ಮೇಲೆ ಬಿದ್ದಿರಬೇಕು, ಫಲಿತಾಂಶ ಬಂದಾಗ ಶ್ರೀ ಸಿದ್ಧಗಂಗಾ ಕಾಲೇಜಿಗೆ ೭ (ಏಳು) ರ್‍ಯಾಂಕ್ ಬಂದಿದ್ದವು. ಉಳಿದವರೆಲ್ಲಾ ತೇರ್ಗಡೆಯಾಗಿದ್ದರು. ೫ನೇ ರ್‍ಯಾಂಕ್ ಗಳಿಸಿದ್ದೆ, ಅಲ್ಲಿ ಅಂದು ಓದಿದ ಬಹಳಷ್ಟು ಮಂದಿ ಬಡ್ತಿ ಪಡೆದು ವಿದ್ಯಾಭ್ಯಾಸ ಮುಂದುವರೆಸಿ ಕವಿಗಳಾಗಿ, ಬರಹಗಾರರಾಗಿ, ಉಪನ್ಯಾಸಕರಾಗಿ, ಆಫೀಸರುಗಳಾಗಿ ಮುಂದೆ ಬಂದವರು ಸಿದ್ಧಗಂಗಾ ಶ್ರೀಗಳ ಶ್ರೀರಕ್ಷೆಯಲ್ಲಿರುವ ನಾವು ಅವರ ೧೧೦ನೇ ಜನ್ಮದಿನದಂದು ಅವರ ಆರೋಗ್ಯ ಮತ್ತು ಆಯುಸ್ಸಿಗಾಗಿ ಪ್ರಾರ್ಥಿಸುತ್ತ ಅವರ ಪೂಜ್ಯ ಪಾದಗಳಿಗೆ ಸಹಸ್ರ ಸಹಸ್ರ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

* * *

## ಶ್ರೀವಾಣಿ

ಇಂದು ರಾಷ್ಟ್ರಜೀವನ ಭ್ರಷ್ಟಗೊಂಡಿದೆ. ಎಲ್ಲೆಲ್ಲೂ, ಎಲ್ಲ ಹಂತದಲ್ಲೂ ನೈತಿಕ ದಿವಾಳಿ ನಡೆದಿದೆ. ಸೋಮಾರಿತನ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. ಜನತೆ ತಮ್ಮ ಶಕ್ತಿಯ ಸದುಪಯೋಗ ಮಾಡಿಕೊಳ್ಳುವ ಪ್ರಯತ್ನವನ್ನೇ ಮಾಡುತ್ತಿಲ್ಲ. ಶ್ರಮ ಯಾರಿಗೂ ಬೇಕಾಗಿಲ್ಲ. ಸುಖ ಎಲ್ಲರಿಗೂ ಬೇಕಾಗಿದೆ. ದುಡಿದು ತಿನ್ನಬೇಕೆಂಬ ದೃಷ್ಟಿನಿಷ್ಠೆಯಿಲ್ಲ. ಸದಾ ಅನಾಯಾಸವಾಗಿ ಸಂಪತ್ತನ್ನು ದೋಚಿಕೊಳ್ಳುವ, ಬಾಚಿಕೊಳ್ಳುವ ಮಾರ್ಗವನ್ನೇ ಹುಡುಕಿಕೊಳ್ಳುವ ಹೀನ ಜೀವನ ದೃಷ್ಟಿ ಬೆಳೆದು ನಿಂತಿದೆ. ಮುಖಂಡರು ಆದರ್ಶ ಪರಂಪರೆಯ ವಾರಸುದಾರರಾಗುತ್ತಿಲ್ಲ. ಸ್ವಾರ್ಥದ ಸಂತೆಯಲ್ಲಿ ಬಾಚಿಕೊಂಡದ್ದೇ ತನ್ನದು ಎಂಬ ದೃಷ್ಟಿಯವರಾಗುತ್ತಿದ್ದಾರೆ. ದೇಶವನ್ನು ಋಣಭಾರದಿಂದ ತತ್ತರಿಸುವಂತೆ ಮಾಡಿದ್ದಾರೆ. ಅನ್ಯ ರಾಷ್ಟ್ರಗಳಿಂದ ತಂದಿರುವ ಸಾಲಕ್ಕೆ ಬಡ್ಡಿ ಕಟ್ಟುವ ಶಕ್ತಿಯೂ ಇಲ್ಲದಂತೆ ಮಾಡಿರುವು ದೊಂದೆ ಐವತ್ತು ವರ್ಷಗಳ ಸಾಧನೆಯಾಗಿದೆ. ಸಾವಿರ ಸಾವಿರ ಕೋಟಿ ರೂ.ಗಳ ಬಡ್ಡಿಯನ್ನು ತೆರಬೇಕಾದ ದುಸ್ಥಿತಿಗೆ ದೇಶವನ್ನು ತಂದು ನಿಲ್ಲಿಸಿದ್ದಾರೆ. ಶ್ರಮವೊಂದೇ, ಕಾಯಕ ಸದ್ಭಾವನೆಯೊಂದೇ ದೇಶಕಟ್ಟುವ ಮಣಿಹವೆಂಬುದನ್ನೇ ಮರೆತಿದ್ದಾರೆ. ದುಡಿದು ತಿನ್ನುವುದು ಪ್ರಸಾದವಾಗುತ್ತದೆ; ಪದಾರ್ಥವೆನಿಸುವುದಿಲ್ಲ. ದುಡಿಯದೆ, ಮೈಗಳ್ಳತನದಿಂದ, ಸೋಮಾರಿಗಳಾಗಿ ಊಟ ಮಾಡುವುದು ಕೂಳಾಗುತ್ತದೆ; ಪ್ರಸಾದವಾಗುವುದಿಲ್ಲ. ಇಂದು ಎತ್ತೆತ್ತ ನೋಡಿದರೂ ಕೂಳುಬಾಕರೇ ವಿಜೃಂಭಿಸಿದ್ದಾರೆ; ಪ್ರಸಾದ ಜೀವಿಗಳು ವಿರಳವಾಗುತ್ತಿದ್ದಾರೆ. ಕಾಯಕಮಾಡದೆ ತಿನ್ನುವುದು ಕೂಳು; ಶ್ರಮ ಜೀವನ ನಡೆಸಿ ಊಟ ಮಾಡುವುದು ಪ್ರಸಾದ.



# ನೆನಪಿನ ಬುತ್ತಿಯಿಂದ

– ಕೆ.ಹೆಚ್. ಶಿವರುದ್ರಯ್ಯ *

ಶ್ರೀ ಸಿದ್ಧಗಂಗಾ ಮಠದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಎಲ್ಲ ಮಕ್ಕಳಿಗೂ ಓದಲು ಅವಕಾಶ ಕಲ್ಪಿಸುತ್ತಾರೆ ಎಂಬ ವಿಷಯ ತಿಳಿದು ನಮ್ಮ ತಂದೆಯವರು ನನ್ನನ್ನು ಪ್ರೌಢಶಾಲೆಯ ೮ನೇ ತರಗತಿಗೆ ೧೯೬೧ರಲ್ಲಿ ಸೇರಿಸಿದರು. ನಾನು ಮಠಕ್ಕೆ ಸೇರಿದಾಗ ವಿದ್ಯಾರ್ಥಿಗಳ ಸಂಖ್ಯೆ ೧೨೦೦ ಮಾತ್ರ ಇತ್ತು. ಸಂಜೆ ಪ್ರಾರ್ಥನೆಯನ್ನು ಎಲ್ಲಾ ವಿದ್ಯಾರ್ಥಿಗಳು ನಿಂತುಕೊಂಡೇ ಮಾಡುತ್ತಿದ್ದರು. ಪ್ರಾರ್ಥನೆ ಕಡ್ಡಾಯವಾಗಿತ್ತು. ಪೂಜ್ಯರು ಕಛೇರಿಯಿಂದ ಹೊರಗೆ ಬಂದಾಗ ವಿದ್ಯಾರ್ಥಿಗಳಾರೂ ಕಾಣಿಸಿಕೊಳ್ಳುತ್ತಿರಲಿಲ್ಲ. ಅಷ್ಟರ ಮಟ್ಟಿಗೆ ವಿದ್ಯಾರ್ಥಿಗಳಲ್ಲಿ ಶಿಸ್ತು ಇತ್ತು. ಶ್ರೀಗಳು ಪ್ರಾರ್ಥನೆ ಮುಗಿದ ಮೇಲೆ ಹಿತವಚನವನ್ನು ಹೇಳುತ್ತಿದ್ದರು. ಸಂಜೆ ೫ರಿಂದ ೬ ಗಂಟೆಯವರೆಗೆ ಶ್ರಮದಾನ ಕಡ್ಡಾಯವಾಗಿತ್ತು. ಪೂಜ್ಯಶ್ರೀಗಳೇ ಕಟ್ಟಡದ ಕಲ್ಲುಗಳನ್ನು ಪ್ರತಿಯೊಬ್ಬ ವಿದ್ಯಾರ್ಥಿಯ ತಲೆಯ ಮೇಲೆ ವಯಸ್ಸಿಗನುಗುಣವಾಗಿ ಹೊರಿಸುತ್ತಿದ್ದರು. ಜನರಲ್ ಹಾಸ್ಟಲ್ ಕಟ್ಟಡದ ಪ್ರತಿಯೊಂದು ಕಲ್ಲನ್ನು ಶ್ರೀಗಳು ಸ್ಪರ್ಶಿಸಿರುತ್ತಾರೆ. ನಾ ಕಂಡಂತೆ ಶ್ರೀಗಳು ಕಪಿಲೆ ಹೊಡೆದಿದ್ದಾರೆ, ಮುದ್ದೆ ತಿರುವಿ ವಿದ್ಯಾರ್ಥಿಗಳಿಗೆ ಬಡಿಸಿದ್ದಾರೆ, ಅನ್ನ ಬಸಿದಿದ್ದಾರೆ, ಪೈರುಗಳನ್ನು ನೆಟ್ಟಿದ್ದಾರೆ. 'ಆಡುಮುಟ್ಟದ ಸೊಪ್ಪಿಲ್ಲ ಶ್ರೀಗಳು ಮಾಡದ ಕಾಯಕವಿಲ್ಲ' ಎಂಬ ಮಾತು ಅಕ್ಷರಶಃ ಸತ್ಯ. **'ಪರೋಪಕಾರಾರ್ಥ ಮಿದಂ ಶರೀರಂ'** ಎಂಬಂತೆ ಪರರಿಗಾಗಿ ತಮ್ಮ ಶರೀರವನ್ನು ಗಂಧದಂತೆ ತೇದಿದ್ದಾರೆ. ತಮ್ಮಿಂದಾದುದನ್ನು ಪರರಿಗಾಗಿ ಮಾಡುವುದೇ ಪರಮಾರ್ಥ ಚಿಂತನೆ **'ಪರಸ್ಪರಂ ಭಾವಯಂತಃ ಶ್ರೇಯಃ ಪರಮಾಪ್ಸ್ಯಥ'** ಎಂಬಂತೆ ಬುದ್ಧ, ಬಸವ, ಗಾಂಧಿ ಮುಂತಾದ ಮಹನೀಯರ ಸಾಲಿಗೆ ಪೂಜ್ಯಶ್ರೀಗಳು ಸೇರಿರುತ್ತಾರೆ. ಯಾರು ಹೇಳದಿದ್ದರೂ ಸೂರ್ಯನು ಬೆಳಕನ್ನು ಕೊಡುವಂತೆ ಚಂದ್ರನು ಕನ್ನೈದಿಲೆಯನ್ನು ಅರಳಿಸುವಂತೆ ಪೂಜ್ಯರು ತಾವಾಗಿಯೇ ಪರರ ಹಿತವನ್ನು ಬಯಸುವವರು.

**ನೆನಪು ೧ :** ಪೂಜ್ಯರು ನಾನು ಓದುತ್ತಿದ್ದ ಕಾಲದಲ್ಲಿ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ವಿದ್ಯಾರ್ಥಿಗಳಿಗೆ ಬೆಳಿಗ್ಗೆ ೬ರಿಂದ ೭ ಗಂಟೆಯವರೆಗೆ ಇಂಗ್ಲಿಷ್ ಪಾಠವನ್ನು ಮಠದ ಮುಂಭಾಗದಲ್ಲಿ ಮಾಡುತ್ತಿದ್ದರು. ನಾನು ಅವರ ಪಾಠದ ಸಾರಾಂಶವನ್ನು ಟಿಪ್ಪಣಿ ಮಾಡಿಕೊಂಡು ಒಂದೇ ಬಾರಿ ಎರಡು ಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳನ್ನು ಪಡೆದು ಉತ್ತೀರ್ಣನಾದೆನು. ತರಗತಿಯಲ್ಲಿ ಕಲಿಯಲಾಗದಿರುವುದನ್ನು ಶ್ರೀಗಳ ಬೋಧನೆಯಿಂದ ಕಲಿತುಕೊಂಡೆನು.

**ನೆನಪು ೨ :** ಒಮ್ಮೆ ಹೇಳದೇ ಕೇಳದೇ ಊರಿಗೆ ಹೋಗಿದ್ದೆನು. ಮಾರನೆಯ ದಿನ ಪೂಜ್ಯರ ಪಾಠಕ್ಕೆ ಹಾಜರಾದೆನು. ಹೆದರಿಕೆ ಮತ್ತು ಭಯ ನನ್ನಲ್ಲಿ ಮನೆ ಮಾಡಿತ್ತು. ಇಂಗ್ಲಿಷ್ ಪಾಠ ಮುಗಿದ ಮೇಲೆ ಪೂಜ್ಯರು ನನ್ನ ಹೆಸರು ಕರೆದು ನೆನ್ನೆ ದಿವಸ ಗೈರುಹಾಜರಾಗಿ ಎಲ್ಲಿಗೆ ಹೋಗಿದ್ದೆ ಏಳು ಮೇಲೆ ಎಂದರು. ನಾನು ತಲೆ ತಗ್ಗಿಸಿ ನಿಂತುಕೊಂಡು ಧೈರ್ಯತುಂಬಿಕೊಂಡು 'ಬುದ್ಧೀ ಊರಿನಲ್ಲಿ ಹೋಳಿಗೆ ಅಡುಗೆ ಮಾಡುತ್ತೇವೆ ಬಾ ಎಂದು ಹೇಳಿದ್ದರು, ಎಂದೆ. 'ಹೇಳದೇ ಕೇಳದೇ ಬಾ ಎಂದು ಕರೆದಿದ್ದರಾ! ಎನ್ನುತ್ತ ನನ್ನ ಹತ್ತಿರ ಬಂದು ಕಿವಿ ಹಿಂಡಿ ಸಣ್ಣ ಚಡಿ ಏಟು ಹೊಡೆದು 'ಇನ್ನು ಮುಂದೆ ಅನುಮತಿ ಪಡೆಯದೇ ಹೋಗಬಾರದು ಎಂದು ಹೇಳಿ ನನಗೆ ಹೋಳಿಗೆ ತಂದಿದ್ದೀಯಾ? ಎಂದು ನಗುತ್ತಾ ಹಾಸ್ಯ ಮಾಡಿದರು. ಆ ನಗುವಿನಲ್ಲಿ ತಂದೆಯ ಪ್ರೀತಿ, ತಾಯಿಯ ಮಮತೆ ಕಂಡೆನು. ಹೀಗೆ ಶ್ರೀಗಳು ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಗುರುತಿಸುತ್ತಿದ್ದರು. ಅವರ ಜ್ಞಾಪಕ ಶಕ್ತಿ ಎಷ್ಟು ಅಗಾಧವಾದುದು ಎಂಬುದಕ್ಕೆ ಇದೊಂದು ನಿದರ್ಶನ.

**ನೆನಪು –೩ :** ಕೆಲವು ವರ್ಷಗಳ ಕಾಲ ಪೂಜ್ಯರು ಮಾರ್ಕಂಡೇಯ ನಿಲಯದ ಮೊದಲನೇ ಅಂತಸ್ತಿನ ಒಂದು ಕೊಠಡಿಯಲ್ಲಿ ಮಲಗುತ್ತಿದ್ದರು. ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಆ ನಿಲಯದ ಕೊಠಡಿಗಳಲ್ಲಿ ಉಳಿದ ಕೊಠಡಿಗಳನ್ನು ಕೊಡುತ್ತಿದ್ದರು. ನಾನು ಇತರ ಸಹಪಾಠಿಗಳು ಒಂದು ಕೊಠಡಿಯಲ್ಲಿದ್ದೆವು. ಪೂಜ್ಯರು ಪೂಜೆ ಪ್ರಸಾದ ಮುಗಿಸಿಕೊಂಡು ರಾತ್ರಿ ೧೦.೩೦ರ ವೇಳೆಗೆ ವಿಶ್ರಾಂತಿಗಾಗಿ ಬರುತ್ತಿದ್ದರು. ಅವರು ಬರುವ ವೇಳೆ ಎಲ್ಲರೂ ನಿಶ್ಯಬ್ಧ. ಮತ್ತೆ ೨.೩೦ಕ್ಕೆ ಎದ್ದು ಹಳೇಮಠಕ್ಕೆ ದಯಮಾಡಿಸುತ್ತಿದ್ದರು. ಪೂಜೆ ಪ್ರಸಾದ ಮುಗಿಸಿ ಬೆಳಿಗ್ಗೆ ೫.೩೦ಕ್ಕೆ ವಿದ್ಯಾರ್ಥಿಗಳನ್ನು

* ಕಾರ್ಯದರ್ಶಿ, ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘ, ಶ್ರೀ ಸಿದ್ಧಗಂಗಾಮಠ



 ನುಡಿ ನಮನ 

ಎಚ್ಚರಗೊಳಿಸುತ್ತಿದ್ದರು. ಒಂದು ದಿನ ಬೆಳಿಗ್ಗೆ ನಮ್ಮ ಕೊಠಡಿಗೆ ಬಂದರು, ನಾವೆಲ್ಲರೂ ಪುಸ್ತಕ ಹಿಡಿದು ಎದ್ದು ನಿಂತುಕೊಂಡೆವು. ಒಬ್ಬ ವಿದ್ಯಾರ್ಥಿ ಮಾತ್ರ ರಗ್ಗನ್ನು ಹೊದ್ದುಕೊಂಡು ಗೊರಕೆ ಹೊಡೆಯುತ್ತಿದ್ದ. ಶ್ರೀಗಳು ಅವನ ಕಾಲನ್ನು ತುಳಿದರು. ನಿದ್ದೆಯಲ್ಲಿಯೇ 'ಹೇ ಯಾವನಲೇ ಅವನು ನನ್ನ ನಿದ್ದೆ ಕೆಡಿಸಿದವನು' ಎನ್ನುತ್ತಾ ಶ್ರೀಗಳನ್ನು ನೋಡಿ ಕಕ್ಕಾಬಿಕ್ಕಿಯಾಗಿ ನಡುಗುತ್ತಾ ನಿಂತುಕೊಂಡ. ಪೂಜ್ಯರು ನಗುತ್ತಾ 'ಮಠದಲ್ಲಿ ಮುದ್ದೆ ರೂಮಿನಲ್ಲಿ ನಿದ್ದೆ' ಎನ್ನುತ್ತಾ ಇನ್ನು ಮುಂದೆ ೫ ಗಂಟೆವರೆಗೆ ಎದ್ದು ಅಭ್ಯಾಸ ಮಾಡಬೇಕು. ಬೆಳಗಿನ ಓದು ತಲೆಗೆ ಹಿಡಿಯುತ್ತದೆ ಎಂದು ಹೇಳಿ ದಯಮಾಡಿಸಿದರು. ಆ ದೃಶ್ಯ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಪೂಜ್ಯರಿಗೆ ಚೆನ್ನಾಗಿ ಓದುವ ವಿದ್ಯಾರ್ಥಿಗಳನ್ನು ಕಂಡರೆ ತುಂಬಾ ಪ್ರೀತಿ ಮತ್ತು ವಾತ್ಸಲ್ಯ.

**ನೆನಪು ೪ :** ೧೯೭೦ರಲ್ಲಿ ನಾನು ಬಿ.ಎ. ಪದವಿ ಪರೀಕ್ಷೆ ಮುಗಿಸಿ ನಂತರ ನಮ್ಮ ತಂದೆಯವರು ಹತ್ತಿರದ ಕೊಳಾಲದಲ್ಲಿರುವ ಪ್ರೌಢಶಾಲೆಗೆ ಉಪಾಧ್ಯಾಯ ವೃತ್ತಿಯನ್ನು ದೊರಕಿಸಿಕೊಟ್ಟರು. ಈ ವಿಚಾರ ಶ್ರೀಗಳಿಗೆ ಹೇಗೋ ತಿಳಿದು ಆ ಕಾಲದಲ್ಲಿ ಶ್ರೀಮಠದಲ್ಲಿ ಖಜಾಂಚಿಯಾಗಿದ್ದ ವಿದ್ವಾನ್ ಶ್ರೀ ಬಿ. ಗಂಗಪ್ಪನವರ ಮೂಲಕ ನನ್ನನ್ನು ಕರೆಸಿಕೊಂಡು ಶ್ರೀಮಠದ ಪ್ರೌಢಶಾಲೆಯಲ್ಲಿ ಉಪಾಧ್ಯಾಯ ವೃತ್ತಿಯನ್ನು ನೀಡಿ ಆಶೀರ್ವದಿಸಿದರು. ಈ ವಾತ್ಸಲ್ಯವನ್ನು ಹೇಗೆ ಮರೆಯಲು ಸಾಧ್ಯ. ಅಂದಿನಿಂದ ೩೦ ವರ್ಷಗಳ ಕಾಲ ಸಹೋಪಾಧ್ಯಾಯನಾಗಿ ೭ ವರ್ಷಗಳ ಕಾಲ ಮುಖ್ಯಶಿಕ್ಷಕನಾಗಿ ಸೇವೆ ಸಲ್ಲಿಸುವ ಸದವಕಾಶವನ್ನು ಶ್ರೀಗಳು ಕಲ್ಪಿಸಿದರು. ೨೦೦೬ರಲ್ಲಿ ಸೇವೆಯಿಂದ ನಿವೃತ್ತಿ ಪಡೆದೆನು.

**ನೆನಪು ೫ :** ೧೯೭೨ರಲ್ಲಿ ಪ್ರಥಮ ದರ್ಜೆ ಗುಮಾಸ್ತರ ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆದು ಉತ್ತೀರ್ಣನಾದೆನು. ಆ ಕಾಲದಲ್ಲಿ ಮೆರಿಟ್ ಆಧಾರದ ಮೇಲೆ ನೌಕರಿ ದೊರೆಯುತ್ತಿತ್ತು. ಸರ್ಕಾರದಿಂದ ನೇಮಕಾತಿ ಪತ್ರ ಆರೋಗ್ಯ ಇಲಾಖೆಗೆ ಯಾವುದೇ ಶಿಫಾರಸ್ಸು ಇಲ್ಲದೆ ಬಂದಿತ್ತು. ಈ ವಿಷಯವನ್ನು ಪೂಜ್ಯರಲ್ಲಿ ಅರಿಕೆ ಮಾಡಿಕೊಂಡೆನು. ಪೂಜ್ಯರು ಸ್ವಲ್ಪ ಸಮಯ ಯೋಚಿಸಿ 'ಎರಡು ಹುದ್ದೆಗಳು ಸಮಾನವಾಗಿವೆ. ಸಮಾನ ವೇತನವಿದೆ. ಹೋಗುವ ಅಗತ್ಯವಿದೆಯೇ? ಯೋಚಿಸು' ಎಂದರು. ಈ ಘಟನೆ ನನ್ನ ಜೀವನದಲ್ಲಿ ಮಹತ್ತರ ತಿರುವು ಪಡೆಯಿತು. ನನ್ನ ಮನಸ್ಸು ಶಾಂತವಾಗಿ ಗುಮಾಸ್ತನಾಗುವ ವಿಷಯವನ್ನು ಕೈಬಿಟ್ಟೆನು.

### ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿ ನೇಮಿಸಿದ್ದು :

೧೯೭೪ರಲ್ಲಿ ಎಂ.ಎ. ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡೆನು. ತುಮಕೂರಿನಲ್ಲಿರುವ ಶ್ರೀ ಸಿದ್ಧಗಂಗಾ ಪದವಿ ಕಾಲೇಜಿನಲ್ಲಿ ಉಪನ್ಯಾಸಕನಾಗುವ ಹಂಬಲದಿಂದ ಒಂದು ದಿನ ಬೆಳಿಗ್ಗೆ ೫.೩೦ಗಂಟೆ ಸುಮಾರಿಗೆ ಪೂಜ್ಯರು ಪೂಜೆ ಮುಗಿಸಿ ಹಳೇ ಮಠದಿಂದ ಹೊರಡುವವರಿದ್ದರು. ಈ ವಿಚಾರವನ್ನು ಅವರಲ್ಲಿ ಅರಿಕೆ ಮಾಡಿಕೊಂಡೆನು. ಪೂಜ್ಯರು ಯಾವ ಪ್ರತಿಕ್ರಿಯೆಯನ್ನು ನೀಡದೆ ನಗುತ್ತಾ ಹೊರಟುಹೋದರು. ನನ್ನ ಅನುಭವಕ್ಕೆ ಬಂದಿದ್ದು ನನಗೆ ಪೂಜ್ಯರು ಇನ್ಯಾವುದೋ ಜವಾಬ್ದಾರಿಯನ್ನು ಕೊಡಬಹುದೆಂದು ಸುಮ್ಮನಾದೆ. ನಾನು ಅಂದುಕೊಂಡಂತೆ ೧೯೭೮ರಲ್ಲಿ ಸಂಘದ ಜವಾಬ್ದಾರಿಯನ್ನು ನೋಡಿಕೊಳ್ಳಲು ಆದೇಶ ನೀಡಿದರು. ನಾನು ಅಂದುಕೊಂಡಂತೆ ಆಯಿತು. ಪೂಜ್ಯರು ಪ್ರತಿಯೊಬ್ಬ ವ್ಯಕ್ತಿಯ ಬಗ್ಗೆ ಯೋಚಿಸಿ ತೀರ್ಮಾನ ತೆಗೆದುಕೊಳ್ಳುವ ಶಕ್ತಿಯನ್ನು ಪಡೆದುಕೊಂಡಿದ್ದಾರೆ. ಇದು ದೇವರು ಕೊಟ್ಟ ವರ.

### ಮುಖ್ಯಶಿಕ್ಷಕನಾಗಿ ಪಡೆದ ಅನುಭವ :

೨೦೦೦ರಲ್ಲಿ ಮುಖ್ಯ ಶಿಕ್ಷಕನಾಗಿ ಬಡ್ತಿ ಪಡೆದುಕೊಂಡೆನು. ಶಾಲಾ ಅಭಿವೃದ್ಧಿಗಾಗಿ ಪೂಜ್ಯರಲ್ಲಿ ಅರಿಕೆ ಮಾಡಿಕೊಂಡಾಗ ನಾನು ಏನು ಕೇಳಿದರೂ ಇಲ್ಲ ಎನ್ನುತ್ತಿರಲಿಲ್ಲ. ಪೂಜ್ಯರದು ಉದಾರ ಮನಸ್ಸು.

ನಾನು ಮುಖ್ಯ ಶಿಕ್ಷಕನಾಗಿದ್ದಾಗ ಒಂದು ಚಿಕ್ಕ ಘಟನೆ ನೆನಪಿಗೆ ಬರುತ್ತಿದೆ. ಒಂದು ದಿನ ಒಬ್ಬ ಉಪಾಧ್ಯಾಯರು ಒಬ್ಬ ವಿದ್ಯಾರ್ಥಿಗೆ ಒಂದೆರೆಡು ಏಟನ್ನು ಕೊಟ್ಟರು. ಅದರಲ್ಲಿ ಯಾವುದೇ ದುರುದ್ದೇಶ ಇರಲಿಲ್ಲ. ಆದರೂ ಆ ವಿದ್ಯಾರ್ಥಿ ವಿಷಯವನ್ನು ಪೂಜ್ಯರಿಗೆ ತಿಳಿಸಿದ. ಕೂಡಲೇ ಶ್ರೀಗಳು ನನ್ನನ್ನು ಮತ್ತು ಉಪಾಧ್ಯಾಯರನ್ನು ಕರೆಸಿ ವಿದ್ಯಾರ್ಥಿಗಳನ್ನು ಶಿಕ್ಷಿಸುವ ಅಧಿಕಾರ ಮುಖ್ಯಶಿಕ್ಷಕರಿಗೆ ಮಾತ್ರ ಇದೆ. ಬೇರೆಯವರಿಗಿಲ್ಲ, ನೀನು ಹಾಗೆ ಮಾಡಬಾರದಾಗಿತ್ತು' ಎಂದರು. ಇದರಿಂದ ನಾನು ಪಡೆದ ಅನುಭವವೆಂದರೆ ಶ್ರೀಗಳು ಮುಖ್ಯ ಶಿಕ್ಷಕನೊಬ್ಬನ ಮೇಲೆ ಇಟ್ಟಿದ್ದ ನಂಬಿಕೆ ಮತ್ತು ವಿಶ್ವಾಸ. ಇದರಿಂದ ನಾನು ಹೆಚ್ಚು ಕೆಲಸ ಮಾಡಲು ಉತ್ತೇಜಿತನಾದೆ. ಮುಖ್ಯಶಿಕ್ಷಕನಾಗಿ ಪಡೆದ ಯಶಸ್ಸಿನ ಹಿಂದಿನ ಪ್ರೇರಕ ಶಕ್ತಿ ಪೂಜ್ಯ ಶ್ರೀಗಳೇ.

### ಹಳೆ ವಿದ್ಯಾರ್ಥಿಗಳ ಬಗ್ಗೆ ಪೂಜ್ಯರಿಗೆ ಇರುವ ವಾತ್ಸಲ್ಯ :

ವರ್ಷಕ್ಕೆ ಒಮ್ಮೆ ಸಂಘದ ಎಲ್ಲಾ ಸದಸ್ಯರು ಒಂದು ಕಡೆ ಕಲೆತು ಮಠಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳುತ್ತಾರೆ. ಪೂಜ್ಯರು ತಮ್ಮ ಅನುಗ್ರಹ ನುಡಿಯಲ್ಲಿ ವಿದ್ಯಾರ್ಥಿಗಳನ್ನು ಕುರಿತು ಹೀಗೆ ಹೇಳಿದ್ದಾರೆ. 'ನೀವು ಶ್ರೀಕ್ಷೇತ್ರದ ಆಸ್ತಿ' ಅಂದು, ಶ್ರೀಮಠವು

ನಿಮಗೆ ಕಿಂಚಿತ್ ಉಪಕಾರ ಮಾಡಿದ್ದಕ್ಕೆ ಆ ಸೇವೆಯನ್ನು ಸ್ಮರಿಸಿ ಬೃಹತ್ ಸಂಖ್ಯೆಯಲ್ಲಿ ಮಾತೃಸಂಸ್ಥೆಯನ್ನು ಮರೆಯದೇ ಸಭೆಗೆ ಬರುತ್ತಿದ್ದೀರಿ. ನಿಮ್ಮ ಕೃತಜ್ಞತೆಗೆ ತುಂಬಾ ಸಂತೋಷವಾಗುತ್ತಿದೆ. ನಮ್ಮ ಪೂಜ್ಯ ಗುರುಗಳಾದ ಶ್ರೀ ಉದ್ದಾನಶಿವಯೋಗಿಗಳು ಜಾತಿ, ಮತಗಳ ಸೋಂಕಿಲ್ಲದೆ ಮಠವನ್ನು ಕಟ್ಟಿದರು. ನೀವು ಸಲ್ಲಿಸುತ್ತಿರುವ ಸೇವಾ ಕ್ಷೇತ್ರಗಳಲ್ಲಿ ಪ್ರಾಮಾಣಿಕತೆಯಿಂದ ಮತ್ತು ಸೇವಾ ಮನೋಭಾವದಿಂದ ನಿಮ್ಮ ಕರ್ತವ್ಯವನ್ನು ನಿರ್ವಹಿಸುವಂತಾದರೆ ಅದೇ ನೀವು ಮಠಕ್ಕೆ ಕೊಡುವ ದೊಡ್ಡ ಕಾಣಿಕೆ. ಪರಮಾತ್ಮನು ಆ ರೀತಿಯ ಸದ್ಬುದ್ಧಿಯನ್ನು ನೀಡಲಿ. ನಿಮ್ಮ ಸದ್ಭಾವನೆ, ಪ್ರೀತಿ, ವಾತ್ಸಲ್ಯ ಸದಾ ಇದ್ದು ಸಂಸ್ಥೆ ಮತ್ತಷ್ಟು ಬೆಳೆಯಲು ಸಹಕಾರಿಯಾಗಲಿ ಎಂದು ಹರಸುತ್ತಾರೆ.

**ಗ್ರಂಥ ಪ್ರಕಟಣಾ ಸಮಿತಿಯ ಸಂಚಾಲಕನಾಗಿ ಪಡೆದ ಅನುಭವ :**

ಪರಮಪೂಜ್ಯ ಶ್ರೀ ಶ್ರೀಗಳವರ ಶತಮಾನೋತ್ಸವ ಸಂದರ್ಭದಲ್ಲಿ ೧೧೧ ಗ್ರಂಥಗಳನ್ನು ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಸಾರಥ್ಯದಲ್ಲಿ ಹೊರತರುವ ಯೋಜನೆಯನ್ನು ಶತಮಾನೋತ್ಸವ ಸಮಿತಿಯು ಹಮ್ಮಿಕೊಂಡಿತ್ತು. ಸಮಿತಿಯ ಸಂಚಾಲಕನಾಗಿ ಪ್ರೊ.ಹೆಚ್.ವಿ. ವೀರಭದ್ರಯ್ಯನವರು ಮತ್ತು ಶ್ರೀ ಎಂ. ರೇಣುಕಾರಾಧ್ಯರ ಜೊತೆಯಲ್ಲಿ ಕೆಲಸ ಮಾಡುವ ಅವಕಾಶ ನನಗೆ ದೊರೆಯಿತು. ಇದು ಅನಿರೀಕ್ಷಿತವಾಗಿ ಬಯಸದೇ ಬಂದ ಭಾಗ್ಯ. ಸುಮಾರು ಒಂದೆರೆಡು ವರ್ಷಗಳ ಈ ಕಾರ್ಯದಲ್ಲಿ ನಾನು ಹೊಸ ಅನುಭವ ಮತ್ತು ಮರೆಯಲಾಗದ ನೆನಪುಗಳನ್ನು ಪಡೆದಿದ್ದೇನೆ. ಏಕೆಂದರೆ ನಾನು ವಿದ್ವಾಂಸನೂ ಅಲ್ಲ. ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದವನೂ ಅಲ್ಲ. ಆದರೆ ಈ ವ್ಯವಹಾರದಿಂದ ಅನೇಕ ಅನುಭವಿ ವಿದ್ವಾಂಸರೊಂದಿಗೆ ಒಡನಾಡುವ ಅವಕಾಶ ಒದಗಿ ಬಂದುದಕ್ಕೆ ಧನ್ಯತೆಯಿಂದ ಎಲ್ಲರನ್ನು, ಮುಖ್ಯವಾಗಿ ಪೂಜ್ಯರನ್ನು ಸ್ಮರಿಸುತ್ತೇನೆ. ಹಳೆಯ ನೆನಪುಗಳು ಮತ್ತು ಹೊಸ ಅನುಭವಗಳು ನನ್ನಲ್ಲಿ ಸದಾ ಹಚ್ಚ ಹಸುರಾಗಿ ಉಳಿದಿವೆ.

ಸಮರ್ಥ ಗುರುವೊಬ್ಬರು ನೈಜ ಕಾಳಜಿಯನ್ನಿರಿಸಿಕೊಂಡು ಮಾಡುವ ಸತ್ಸಂಕಲ್ಪ ಸಾಕಾರಗೊಳ್ಳುವುದರಲ್ಲಿ ಯಾವುದೇ ಸಂಶಯವಿಲ್ಲ ಎಂಬುದಕ್ಕೆ ಪ್ರತ್ಯಕ್ಷ ಉದಾಹರಣೆ ನಮ್ಮ ಗುರುದೇವರಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು. ಪೂಜ್ಯಶ್ರೀಗಳು ಜನಮನದಲ್ಲಿ ಮನೆ ಮನಗಳಲ್ಲಿ ಬೆಳಕು ತೋರುವ ಪರಂಜ್ಯೋತಿಯಾಗಿ ಬೆಳಗುತ್ತಾ ಇದ್ದಾರೆ.

## ಪೂಜ್ಯ ಶ್ರೀ ಶಿವಕುಮಾರ ಶ್ರೀಗಳಿಗೆ ಭಕ್ತಿಪೂರ್ವಕ ನಮನ

ಸಿದ್ಧಪುರುಷ ನೆಲಸಿರುವ ನಾಡು
ತುಮಕೂರಿನ ಸುಕ್ಷೇತ್ರ ಸಿದ್ಧಗಂಗಾ ಬೀಡು।
ಈ ಶತಮಾನ ಕಂಡ ಶಿವಯೋಗಿ
ಡಾ. ಶಿವಕುಮಾರಸ್ವಾಮಿ ಕಾಯಕಯೋಗಿ।
ಅನ್ನ ಅಕ್ಷರ ಆಶ್ರಯ ನೀಡಿಹರು
ತ್ರಿವಿಧ ದಾಸೋಹಿ ಎಂದೆನಿಸಿಹರು।
ಸ್ಥಾಪಿಸಿಹರು ಅನೇಕ ಶಿಕ್ಷಣ ಸಂಸ್ಥೆಗಳನು
ಸರ್ವೇಶ ಕರುಣಿಸಲಿ ದೀರ್ಘಾಯುಷ್ಯವನು।
ಸಿರಿ ಸಂಪತ್ತು ಐಶ್ವರ್ಯದಾ ತಿರಸ್ಕಾರ
ಪ್ರಶಸ್ತಿ ಪುರುಸ್ಕಾರದಿಂ ಬಲುದೂರ।
ಅರ್ಥಪೂರ್ಣ ಜ್ಞಾನಬಿತ್ತರಿಸುವ ಉಕ್ತಿ
ಅಘಾದವರು ಅಜ್ಞಾನ ಅಳಿಸುವ ರೀತಿ।
ನಡೆಯಿದೆ ನುಡಿಯಂತೆ ಈ ತ್ಯಾಗಿಯ ಜೀವನ
ಸ್ನೇಹ, ಪ್ರೀತಿಯಿಂ ಜಯಸಿಹರು ಜನಮನ।
ಕರುಣೆ ವಾತ್ಸಲ್ಯದಾ ಈ ಶಾಂತಮೂರ್ತಿ
ನೀಡಿಹರು ಜ್ಞಾನ ಶ್ರದ್ಧೆ ತ್ಯಾಗ ಸ್ಪೂರ್ತಿ।
ನಡೆದಾಡುವ ದೇವರೆಂದೇ ಪ್ರತೀತಿ
ವಿಶ್ವದಲಿ ಹರಡಿದೆ ಅವರ ಕೀರ್ತಿ।
ಲಕ್ಷ ಲಕ್ಷ ಹೃನ್ಮನ ಬೆಸೆವ ಸಂಗಮ
ಭಾವೈಕ್ಯತೆ ಮೂಡಿಸುವ ನಿಜ ಜಂಗಮ।
ವಿಶ್ವವನಾವರಿಸುವ ಅವರ ಅಮೃತವಾಣಿ
ಸಿರಿ ಸಂಪತ್ತು ಸ್ಪರ್ಶಿಸದ ಶುಭ್ರಪಾಣಿ।
ಜಾತಿ ಮತ ಪಂಥ ಎನ್ನದ ಗುರುವರಾ
ಜನಮನ ಸೂರೆಗೈವ ಜ್ಞಾನೇಶ್ವರಾ।
ದಯವೇ ಧರ್ಮದ ಮೂಲ ಮಂತ್ರ
ಸರಳ ಸಜ್ಜನಿಕೆಯೇ ಪರಮ ತಂತ್ರ।
ಜ್ಞಾನ ದಾಸೋಹಿ ಅನ್ನದಾಸೋಹಿ ಯತಿ
ಗೆಲುವ ಜೀವನದ ಗುಟ್ಟ ಅರುಹಿದ ಮತಿ।
ಜ್ಞಾನಿಯೊ ! ತತ್ವಜ್ಞಾನಿಯೊ ! ಸರ್ವಜ್ಞನೊ !
ಯಾವ ನಾಮದಿ ಸ್ಮರಿಸಿದರೂ ತೃಪ್ತಿ ಭಾವ।
ಶರಣ ಸಂತ ಮಹಂತ ಅನಂತ
ಅಂತರಂಗದಿ ಪರಿಪೂರ್ಣ ಭಗವಂತ।
ನೂರೊಂದು ವಸಂತ ಕಂಡ ದಿವ್ಯ ಚೇತನ
ಇದೋ ನಿಮಗೆ ಕೋಟಿ ಕೋಟಿ ಭಕ್ತಿ ನಮನ।

**– ಗಂಗಾಧರ ಬಸಪ್ಪ ಭೂತಿ**
ಶ್ರೀ ಬಸವರಾಜ ಮೆಡಿಕಲ್ಸ್ ಸ್ಟೋರ್ಸ್
ಗೋಕಾಕ - ೫೯೧ ೩೦೭





# ರಾಷ್ಟ್ರ ಕಂಡ ಮಹಾಸಂತ

**– ಜಿ. ನಾಗಸುಂದರ್ ***

**ಈ** ರಾಷ್ಟ್ರಕಂಡ ಮಹಾಸಂತ, ಮಹಾತಪಸ್ವಿ, ವೈರಾಗ್ಯಮೂರ್ತಿ, ಅನುಭಾವಿ, ಮಹಾಮಾನವತಾವಾದಿ, ಜ್ಞಾನಜ್ಯೋತಿ, ತ್ರಿವಿಧ ದಾಸೋಹಮೂರ್ತಿ, ಕರ್ನಾಟಕ ರತ್ನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನೂರೊಂದು ವರ್ಷಗಳ ಸಾರ್ಥಕ ಜೀವನ ನಡೆಸಿ ಲಕ್ಷ ಲಕ್ಷ ಜನರ ಹೃದಯಮಂದಿರದಲ್ಲಿ ಜ್ಞಾನಜ್ಯೋತಿಯನ್ನು ಹಚ್ಚಿದ ಮಹಾತ್ಮರು. ಅವರು ಹಚ್ಚಿದ ಜ್ಞಾನಜ್ಯೋತಿಯು ದಿವ್ಯಪ್ರಭೆಯಲ್ಲಿ ಭವಿಷ್ಯವನ್ನು ರೂಪಿಸಿಕೊಂಡ ವಿವಿಧ ಸಮುದಾಯಗಳಿಗೆ ಸೇರಿದ ಲಕ್ಷ ಲಕ್ಷ ವಿದ್ಯಾರ್ಥಿಗಳು ವಿಶ್ವದ ವಿವಿಧ ಭಾಗಗಳಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರೆಲ್ಲರ ಮನೆ ಮನಗಳಲ್ಲಿ ಸಿದ್ಧಗಂಗಾ ಜ್ಯೋತಿ ಪ್ರಜ್ವಲಿಸುತ್ತದೆ. ಪೂಜ್ಯ ಶ್ರೀಗಳವರು ಮನುಕುಲದ ಉದ್ಧಾರಕ್ಕಾಗಿ ಲೋಕಕಲ್ಯಾಣಕ್ಕಾಗಿ ಅವತರಿಸಿದ ಮಹಾಪುರುಷರು. ಕೊಡುವವನು ಶಿವನಿರುವಾಗ ನಾನೇಕ ಚಿಂತಿಸಲಿ, ಎಲ್ಲವೂ ಶಿವನಿಚ್ಛೆಯೆಂದು ಭಾವಿಸಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ತಮ್ಮ ಜೀವನದ ಒಂದೊಂದು ನಿಮಿಷವನ್ನು ಸಾರ್ಥಕಪಡಿಸಿಕೊಳ್ಳುತ್ತಿರುವ ಸ್ಥಿತಪ್ರಜ್ಞರು. ಕಳೆದ ೮೭ ವರ್ಷಗಳಿಂದ ಶ್ರೀಮಠದ ಪೀಠಾಧ್ಯಕ್ಷರಾಗಿ ಸದ್ದುಗದ್ದಲವಿಲ್ಲದೆ ಕೆಳಸ್ತರದ ಜನರನ್ನು ಮೇಲೆತ್ತಲು ಮಾಡುತ್ತಾ ಬಂದಿರುವ ಸೇವೆ; ಅಪೂರ್ವ ಸಾಧನೆ, ಮಾತಿಗೆ ನಿಲುಕದು. ಅವರ ಸಾಧನೆಯ ಯಶಸ್ಸು ಬೆಳಗಾಗುವುದರೊಳಗೆ ಬಂದುದಲ್ಲ; ಅವರು ಸಾಧನೆಯ ಒಂದೊಂದು ಮೆಟ್ಟಿಲುಗಳನ್ನು ಏರುವಾಗಲೂ ಎದುರಾದ ಸಮಸ್ಯೆಗಳನ್ನು ತಾಳ್ಮೆಯಿಂದ, ದಿಟ್ಟತನದಿಂದ ಪರಿಹರಿಸಿಕೊಂಡು **'ಸೇವೆ'**ಗೆ ಒಂದು ಮಹತ್ವವನ್ನು ತಂದುಕೊಟ್ಟ ಮಹಾ ಶರಣರು.

ಹನ್ನೆರಡನೆ ಶತಮಾನದಲ್ಲಿ ಬಸವಾದಿ ಶರಣರು ನಡೆಸಿದ ಸಮಾಜೋಧಾರ್ಮಿಕ ಕ್ರಾಂತಿ ಕರ್ನಾಟಕದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಆಗ ಈಗಿನಂತೆ ಪ್ರಚಾರ, ಪ್ರಸಾರ ಮಾಧ್ಯಮಗಳಿಲ್ಲದ ಕಾಲದಲ್ಲೂ ಬಸವಣ್ಣನವರು ಮಾಡಿದ ಸಾಮಾಜಿಕ ಕ್ರಾಂತಿ, ಸಮಾನತೆ, ಅಸ್ಪೃಶ್ಯತೆ ನಿವಾರಣೆ ಇವೇ ಮೊದಲಾದ ಮಹತ್ವ ಕಾರ್ಯದಿಂದ ಹಾಗೂ ಕಾಯಕ-ದಾಸೋಹ ಸಿದ್ಧಾಂತ ಇವೆಲ್ಲದರ ಪ್ರಭಾವ ನೆರೆರಾಜ್ಯಗಳಿಗಲ್ಲದೆ ದೂರದ ಕಾಶ್ಮೀರ ದೇಶಕ್ಕೂ ಮುಟ್ಟಿ ಅವರೆಲ್ಲರೂ ಪ್ರಭಾವಿತರಾಗಿ ಕಲ್ಯಾಣಕ್ಕೆ ಬಂದುದುದು ಒಂದು ಐತಿಹಾಸಿಕ ದಾಖಲೆ. ಕಾಶ್ಮೀರದ ರಾಜ ಮಹಾದೇವ ರಾಜ್ಯವನ್ನು ತ್ಯಜಿಸಿ ತನ್ನ ಹೆಂಡತಿಯೊಂದಿಗೆ ಕಲ್ಯಾಣಕ್ಕೆ ಬಂದುದು ಬಸವಣ್ಣನವರ ವ್ಯಕ್ತಿತ್ವಕ್ಕೆ ಒಂದು ಜ್ವಲಂತ ನಿದರ್ಶನ. ಶ್ರೀಮಠದ ಕೀರ್ತಿಕಳಸ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿಸ್ವಾರ್ಥ ಸೇವೆ, ನಿರಂತರ ಸಾಧನೆ ಅವರು ಮಾಡುತ್ತಿರುವ ಜ್ಞಾನದಾಸೋಹ, ಅನ್ನದಾಸೋಹ ಇವುಗಳ ಬಗ್ಗೆ ಕೇಳಿ ತಿಳಿದ ರಾಜ್ಯದ ವಿವಿಧ ಮೂಲೆಗಳಿಂದಲ್ಲದೆ ನೆರೆ ರಾಜ್ಯಗಳಿಂದಲೂ ಪೋಷಕರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಶ್ರೀಮಠಕ್ಕೆ ಕರೆದುಕೊಂಡು ಬಂದು ಸೇರಿಸುತ್ತಿರುವುದು ಅಪೂರ್ವ ಘಟನೆ.

ಬಸವಾದಿ ಶರಣರ ಆದರ್ಶದ ಭದ್ರಬುನಾದಿಯ ಮೇಲೆ ಕಟ್ಟಿರುವ ಶ್ರೀ ಸಿದ್ಧಗಂಗಾ ಮಠ ಕಾಯಕದ ಕಮ್ಮಟವಾಗಿದ್ದು, ದಾಸೋಹದ ಮಹಾಮನೆಯಾಗಿದೆ. ಶಿಕ್ಷಣ ಸೇವೆಯ **'ಗುರುಕುಲ'**ವನ್ನಾಗಿ ಜ್ಞಾನಕ್ರಿಯೆಗಳ ಸಮನ್ವಯ ಕೇಂದ್ರವನ್ನಾಗಿ ಮಾಡಿದ್ದಾರೆ. ಸಮಾಜದ ಸರ್ವತೋಮುಖ ಅಭಿವೃದ್ಧಿಗೆ, ಆದರ್ಶ ಸಮಾಜದ ನಿರ್ಮಾಣಕ್ಕೆ ಸಮಾನತೆ, ಸಹಬಾಳ್ವೆ, ಅಸ್ಪೃಶ್ಯತಾ ನಿವಾರಣೆ, ಕಾಯಕನಿಷ್ಠೆ ಕಾಯಕದಿಂದ ಬಂದ ಸಂಪಾದನೆಯಲ್ಲಿ ಹಂಚಿ ಉಣ್ಣಬೇಕೆನ್ನುವ ಮಾನವೀಯತೆ, ಪರಧರ್ಮ ಸಹಿಷ್ಣುತೆ, ನೈತಿಕತೆ ಇವೆಲ್ಲವನ್ನು ಪರಮಪೂಜ್ಯ ಶ್ರೀಗಳವರು ಶ್ರೀಮಠದಲ್ಲಿ ಸಾಕಾರಗೊಳಿಸಿದ್ದಾರೆ.

ಪರಮಪೂಜ್ಯ ಶ್ರೀಗಳವರು ಕಳೆದ ಎಂಭತ್ತೇಳು ವರ್ಷಗಳಿಂದ ಸಲ್ಲಿಸುತ್ತಿರುವ ಅನುಪಮ ಸೇವೆಯಿಂದ ಇಂದು ಸಿದ್ಧಗಂಗಾ ನಾಡಿನ, ದೇಶದ ಮನೆಮಾತಾಗಿದೆ. ಮಹಾಯೋಗಿ ಶ್ರೀ ಗೋಸಲಸಿದ್ಧೇಶ್ವರ ತಪಶ್ಶಕ್ತಿಯಿಂದ ಉದ್ಭವಗೊಂಡ ಪರಮ ಪಾವನೆ ಶ್ರೀ ಗಂಗಾಮಾತೆ ಕಳೆದ ೨೦೦ ವರ್ಷಗಳಿಂದಲೂ ನಿರಂತರವಾಗಿ ಪ್ರವಹಿಸುತ್ತಾ

* ಮಾಲೀಕರು, ಗೀತಾಂಜಲಿ ಗ್ರಾಫಿಕ್ಸ್ ನಂ. ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ., ಕೈಗಾರಿಕ ಎಸ್ಟೇಟ್, ರಾಜಾಜಿನಗರ ೬ನೇ ಬ್ಲಾಕ್, ಬೆಂಗಳೂರು

ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುತ್ತಿದ್ದಾಳೆ. ಅಂತೆಯೇ ಕಳೆದ ಒಂಭತ್ತು ದಶಕಗಳಿಂದಲೂ ಜ್ಞಾನದಾಸೋಹ, ಅನ್ನದಾಸೋಹ ನಿರಂತರವಾಗಿ ನಡೆಯುತ್ತಿದ್ದು ಜಾತಿ, ವರ್ಗ ಭೇದವಿಲ್ಲದೆ ಲಕ್ಷಾಂತರ ವಿದ್ಯಾರ್ಥಿಗಳು ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಉತ್ತಮ ನಾಗರಿಕರಾಗಿ ರಾಷ್ಟ್ರದ ಅಭಿವೃದ್ಧಿ ವಾಹಿನಿಯಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಶ್ರೀ ಸಿದ್ಧಗಂಗಾ ಕ್ಷೇತ್ರ ಒಂದು ಪುಟ್ಟ ಭಾರತವಿದ್ದಂತೆ. ಇಲ್ಲಿ ಎಪ್ಪತ್ತಕ್ಕೂ ವಿವಿಧ ಜಾತಿ, ವರ್ಗಗಳಿಗೆ ಸೇರಿದ ಮಕ್ಕಳಿಗೆ ಆಶ್ರಯನೀಡಿ ಉಚಿತ ಶಿಕ್ಷಣ, ಅನ್ನ, ವಸತಿಯನ್ನು ಕಲ್ಪಿಸಿಕೊಡಲಾಗುತ್ತಿದೆ. ಮೊದಲು ಸಂಸ್ಕೃತವೆಂದರೆ ಉಕ್ಕಿನ ಕಡಲೆ, ಮೇಲ್ವರ್ಗದವರಿಗಷ್ಟೆ ಕಲಿಯಲು ಅವಕಾಶ ಎಂಬ ಭಾವನೆಯನ್ನು ಶ್ರೀಮಠದಲ್ಲಿ ಕಿತ್ತೊಗೆದು ದಲಿತರು, ಪರಿಶಿಷ್ಟಜಾತಿ, ವರ್ಗ, ಮುಸಲ್ಮಾನರೂ ಸಂಸ್ಕೃತವನ್ನು, ವೇದವನ್ನು ಕಲಿಯಲು ಅವಕಾಶಮಾಡಿಕೊಟ್ಟ ಶ್ರೀ ಉದ್ದಾನ ಶಿವಯೋಗಿಗಳವರ ದೂರದೃಷ್ಟಿ ಸಾಮಾಜಿಕ ಕಳಕಳಿ ಮೆಚ್ಚುವಂತಹದು. ಅವರು ಹಾಕಿಕೊಟ್ಟ ಭವ್ಯ ಪರಂಪರೆಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು 'ನಭೂತೋ ನ ಭವಿಷ್ಯ' ಎಂಬಂತೆ ಬೆಳೆಸುದುದು ಒಂದು ಪವಾಡವೇ ಸರಿ. ಮೊದಲು ಎರಡಂಕಿಯಿಂದ ಪ್ರಾರಂಭವಾದ ವಿದ್ಯಾರ್ಥಿಗಳ ಸಂಖ್ಯೆ ಇಂದು ಬೃಹದಾಕಾರವಾಗಿ ಬೆಳೆದು ಸುಮಾರು ಒಂಭತ್ತು ಸಾವಿರದಷ್ಟಾಗಿದೆ ಎಂದರೆ ಶ್ರೀಮಠದ ಕಾರ್ಯಚಟುವಟಿಕೆ ಗಳನ್ನು ಕಣ್ಣಾರೆ ನೋಡದವರು ನಂಬುವುದು ಕಷ್ಟವಾಗುತ್ತದೆ.

ಕಳೆದ ೮೭ ವರ್ಷಗಳಿಂದ ಶ್ರೀಮಠದಲ್ಲಿ ಆಶ್ರಯಪಡೆದು ಪೂಜ್ಯ ಶ್ರೀಗಳವರ ಮಾರ್ಗದರ್ಶನ ಹಾಗೂ ದಿವ್ಯಾಶೀರ್ವಾದದಿಂದ ಸುಸಂಸ್ಕೃತ ವಿದ್ಯಾವಂತರಾಗಿ, ನೈತಿಕ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರೀಮಠದಿಂದ ಹೊರಗೆ ಬಂದವರ ಸಂಖ್ಯೆ ಅಗಣಿತ. ಸಕಲರಿಗೂ ಲೇಸನ್ನೇ ಬಯಸುವ, ಶ್ರೀಗಳವರು **'ಇವನಾರವ ಇವನಾರವ ಎನ್ನದೆ ಇವ ನಮ್ಮ ಇವ ನಮ್ಮವ'** ಎಂದು ಎಲ್ಲರಿಗೂ ಬೇಕಾದ ಮಹಾಮಾನವತಾವಾದಿ, ವಾತ್ಸಲ್ಯಮೂರ್ತಿ.

ಪೂಜ್ಯ ಶ್ರೀಗಳವರನ್ನು ಭಕ್ತರು ತಮ್ಮ ಹೃದಯ ಮಂದಿರದಲ್ಲಿಟ್ಟು, ಭಕ್ತಿ ಗೌರವದಿಂದ ಆರಾಧಿಸುತ್ತಿದ್ದಾರೆ. ಅವರನ್ನು ನಡೆದಾಡುವ ದೇವರೆಂದೇ ಕರೆಯುತ್ತಿದ್ದಾರೆ. ನಾವು ಕಾಣದ ದೇವರನ್ನು ನೋಡಲು ಗುಡಿಗಳಿಗೆ ಹೋಗಬೇಕಾಗಿಲ್ಲ. ಶ್ರೀಮಠಕ್ಕೆ ಹೋದರೆ ಸಾಕು ನಮಗೆ ಸಾಕ್ಷಾತ್ ಶಿವನನ್ನೇ ಕಂಡಂತಾಗುತ್ತದೆ. ನಾವು ಪೂಜ್ಯ ಶ್ರೀಗಳವರಲ್ಲಿ ನಾವು ಶಿವನನ್ನು ಕಂಡರೆ ಪೂಜ್ಯ ಶ್ರೀಗಳು



ಶ್ರೀಮಠದಲ್ಲಿರುವ ಒಂಬತ್ತು ಸಾವಿರ ಮಕ್ಕಳಲ್ಲಿ ಶಿವನನ್ನು ಕಾಣುತ್ತಿದ್ದಾರೆ. ಮಕ್ಕಳಿಗೆ ಮಾತೃವಾತ್ಸಲ್ಯದ ಮಹಾಪೂರವನ್ನೇ ಹರಿಸುತ್ತಿದ್ದಾರೆ. ಹಬ್ಬದ ದಿನಗಳಲ್ಲಿ ಆಯಾ ಹಬ್ಬದಲ್ಲಿ ಮಾಡುವ ಅಡುಗೆಯನ್ನು ಮಾಡಿಸುತ್ತಾರೆ. ಉದಾ : ಯುಗಾದಿ ಹಬ್ಬದಲ್ಲಿ ಹೋಳಿಗೆ, ಗಣೇಶನ ಹಬ್ಬದಲ್ಲಿ ಕಡುಬು ಮಾಡಿಸುತ್ತಾರೆ. ಇಷ್ಟೊಂದು ಬೃಹತ್ ಸಂಖ್ಯೆಯಲ್ಲಿರುವ ವಿದ್ಯಾರ್ಥಿಗಳಿಗೆ ಕಡುಬು ಮಾಡುವುದು ಕಷ್ಟ ಎಂದು ಅಡಿಗೆಮನೆ ಮೇಲ್ವಿಚಾರಕರು ತಿಳಿಸಿದಾಗ, ಅದಕ್ಕೆ ಪೂಜ್ಯರು ಎಷ್ಟೇ ಕಷ್ಟವಾದರೂ ಕಡುಬನ್ನು ಮಾಡಿಸಲೇಬೇಕು. ಮಕ್ಕಳಿಗೆ ನಾವು ಊರಿನಲ್ಲಿದ್ದರೆ ಕಡುಬು ತಿನ್ನಬಹುದಾಗಿತ್ತು ಎಂಬ ಭಾವನೆ ಬರಬಾರದು ಎಂಬ ಅವರ ಮನದೊಳಗಿನಿಂದ ಬಂದ ಶಿವನುಡಿ ಮಕ್ಕಳ ಬಗ್ಗೆ ಅವರಿಗಿರುವ ಮಾತೃಚೇತನದ





ಪರಿಚಯವಾಗುತ್ತದೆ. ಕಳೆದ ಅನೇಕ ವರ್ಷಗಳಿಂದ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ನೇತೃತ್ವದಲ್ಲಿ ಕಡುಬಿನ ತಯಾರಿ ನಡೆಯುತ್ತದೆ. ಕಿರಿಯ ಶ್ರೀಗಳು ಕಡುಬು ಮಾಡುವಲ್ಲಿ ತಮ್ಮನ್ನು ತೊಡಗಿಸಿ ಕೊಳ್ಳುತ್ತಿದ್ದಾರೆ. ಮಕ್ಕಳು ಹೊಟ್ಟೆಯ ತುಂಬ ತಿಂದು ಸಂತೋಷಪಡುವುದನ್ನು ನೋಡಿದಾಗ ಪೂಜ್ಯ ಶ್ರೀಗಳವರಿಗೆ ಆಗುವ ಆನಂದ ಮಾತಿಗೆ ನಿಲುಕದು.

ಪೂಜ್ಯ ಶ್ರೀಗಳವರು ಮಕ್ಕಳಿಗೆ ಮಮತೆಯ ತಾಯಿಂಯಾಗಿ ಪ್ರೀತಿ ವಾತ್ಸಲ್ಯಗಳ ಧಾರೆಯನ್ನೇ ಎರೆಯುತ್ತಿದ್ದಾರೆ. ಮಾರ್ಗದರ್ಶನ ನೀಡುವ ಗುರುವಾಗಿ, ಆಧ್ಯಾತ್ಮವನ್ನು ಬೋಧಿಸುವ ಮಹಾಸಂತರಾಗಿ ಅವರಲ್ಲಿ ಅರಿವಿನ ಜ್ಞಾನಜ್ಯೋತಿ ಬೆಳಗುವಂತೆ ಮಾಡಲು ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಮಕ್ಕಳು ಕಾಯಿಲೆಯಿಂದ ಹಾಸಿಗೆ ಹಿಡಿದ ಸುದ್ದಿ ತಿಳಿದರೆ ಶ್ರೀಗಳವರ ಮಮತೆಯ ಮಾತೃಚೇತನ ಮಿಡಿಯುತ್ತದೆ. ಆ ಮಕ್ಕಳಿಗೆ ಔಷದೋಪಚಾರ ಮಾಡಿಸಿ ಅವರ ಬಗ್ಗೆ ತುಂಬಾ ಎಚ್ಚರ ವಹಿಸುತ್ತಾರೆ. ಬಹುಶಃ ತಂದೆ ತಾಯಿಗಳಿಂದಲೂ ಸಿಗದ ಮಾತೃಪ್ರೇಮ ವಾತ್ಸಲ್ಯ ಶ್ರೀಗಳವರಲ್ಲಿ ದೊರೆಯುತ್ತದೆ. ಮಕ್ಕಳಲ್ಲಿ ತಾವು ತಂದೆ ತಾಯಿಗಳನ್ನು ಬಿಟ್ಟು ಬಂದಿದ್ದೇವೆ ಎಂಬ ಭಾವನೆ ಬಾರದಂತೆ ನೋಡಿಕೊಳ್ಳುತ್ತಿದ್ದಾರೆ.

**'ಆಕಾಶಕ್ಕೆ ಆಕಾಶವೇ ಹೋಲಿಕೆ ಆಗಬಲ್ಲದು. ಆದರೆ ಅದನ್ನು ಹೋಲಿಕೆ ಮಾಡಬೇಕಾದರೆ ಇನ್ನೊಂದು ಆಕಾಶವಿಲ್ಲ. ಸಿದ್ಧಗಂಗಾ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಹೋಲಿಕೆ ಮಾಡಲು ಇನ್ನೊಬ್ಬರು ಶ್ರೀ ಶಿವಕುಮಾರ ಸ್ವಾಮಿಗಳನ್ನು ಎಲ್ಲಿಂದ ತರಬೇಕು; ಸೂರ್ಯನು ಉದಯಿಸುವಲ್ಲಿ ಹೆಚ್ಚು ಕಡಿಮೆ ಆಗಬಹುದು. ಆದರೆ ವಿದ್ಯಾರ್ಥಿಗಳಿಗೆ ಪ್ರಸಾದ ವ್ಯವಸ್ಥೆ ಮಾಡಲು ಎಂದು ಹೆಚ್ಚು ಕಡಿಮೆ ಆಗುವುದಿಲ್ಲ. ವಿದ್ಯಾರ್ಥಿಗಳಿಗೆ ಈ ರೀತಿಯ ವ್ಯವಸ್ಥೆ ಯಾವ ಖಂಡದಲ್ಲಿಯೂ ಯಾರಿಂದಲೂ ನಡೆದಿಲ್ಲ'** ಎಂಬ ಹಿರಿಯ ಪತ್ರಕರ್ತ ಡಾ. ಪಾಟೀಲ ಪುಟ್ಟಪ್ಪನವರ ಮಾತುಗಳಾಗಲಿ, **'ಸೇವೆ'** ಎಂಬ ಪದದ ನಿಜವಾದ ಅರ್ಥವನ್ನು ಕಾಣಬೇಕಾದರೆ ಶ್ರೀ ಸಿದ್ಧಗಂಗ ಕ್ಷೇತ್ರಕ್ಕೆ ಹೋಗಿ ನೋಡಬೇಕು ಎಂಬ ಭಾರತದ ಮಾಜಿ ಪ್ರಧಾನಿಗಳಾದ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರ ಮಾತುಗಳು ಪರಮಪೂಜ್ಯ ಶ್ರೀಗಳವರ ನಿಸ್ವಾರ್ಥ ಸೇವೆಗೆ ಬರೆದ ಭಾಷ್ಯದಂತಿದೆ.

ಬಡವರ ಪಾಲಿಗೆ ಕಾಮಧೇನು, ಕಲ್ಪವೃಕ್ಷವಾಗಿರುವ ಪೂಜ್ಯ ಶ್ರೀಗಳವರು ಕಳೆದ ಎಂಟು ದಶಕಗಳಿಂದ ರಾಷ್ಟ್ರದ ಅಭಿವೃದ್ಧಿವಾಹಿನಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಶ್ರೀಗಂಧದಂತೆ ತೇಯ್ದು, ಸಮಾಜದಲ್ಲಿ ಶಾಂತಿ ನೆಮ್ಮದಿ ನೆಲೆಸುವಂತೆ ಮಾಡುವಲ್ಲಿ ಅವರು ಸಲ್ಲಿಸುತ್ತಿರುವ ಸೇವೆ ಬಹುಶಃ ವಿಶ್ವದ ಇತಿಹಾಸದಲ್ಲಿ ಇಂತಹ ನಿದರ್ಶನ ಮತ್ತೊಂದು ಸಿಗಲಾರದು.

ಪೂಜ್ಯ ಶ್ರೀಗಳವರು ಕೀರ್ತಿಗೆ, ಪ್ರಶಸ್ತಿ ಪರಸ್ಕಾರಗಳಿಗೆ ಬೆನ್ನ ಹತ್ತಿದವರಲ್ಲ. ಅವರಿಗೆ ಯಾವ ಪ್ರಶಸ್ತಿ ಪರಸ್ಕಾರಗಳು ಬೇಕಾಗಿಲ್ಲ. ಪ್ರಶಸ್ತಿಗಳು ಅವರ ಬೆನ್ನತ್ತಿಬಂದರೂ ನಿರ್ಲಿಪ್ತ ಭಾವನೆಯಿಂದ ತಿರಸ್ಕರಿಸಿದ ಸ್ಥಿತಪ್ರಜ್ಞರು. ಭಕ್ತರು, ಅಭಿಮಾನಿಗಳು, ರಾಜಕಾರಣಿಗಳು ಪೂಜ್ಯ ಶ್ರೀಗಳವರಿಗೆ **'ಭಾರತರತ್ನ'** ಪ್ರಶಸ್ತಿ ನೀಡಬೇಕೆಂಬ ಕೇಂದ್ರ ಸರ್ಕಾರದವರು ಒತ್ತಾಯಿಸುವ ಸಂದರ್ಭದಲ್ಲಿ ಇದರ ಅಗತ್ಯವಿಲ್ಲ, ನೀವೆಲ್ಲ ಶ್ರೀಮಠದ ಮೇಲಿಟ್ಟಿರುವ ಪ್ರೀತಿ, ಅಭಿಮಾನ, 'ಭಾರತರತ್ನ' ಪ್ರಶಸ್ತಿಗಿಂತ ದೊಡ್ಡದು ಎಂದು ಹೇಳುವುದರ ಮೂಲಕ ಎಲ್ಲರ ಭಾವನೆಗಳಿಗೆ ತೆರೆ ಎಳೆದ ಸರಳ ಜೀವಿಗಳು. ಪೂಜ್ಯ ಶ್ರೀಗಳು **'ಭಾರತರತ್ನ'**ವಷ್ಟೇ ಅಲ್ಲ, ಅವರೊಂದು **'ವಿಶ್ವರತ್ನ'**ವಾಗಿ ಲಕ್ಷಾಂತರ ಭಕ್ತರ ಹೃದಯ ಮಂದಿರದಲ್ಲಿ ರಾರಾಜಿಸುತ್ತಿದ್ದಾರೆ. ಅವರ ದರ್ಶನ ಮಾಡಿ ಪಾದಗಳನ್ನು ಮುಟ್ಟಿ ನಮಸ್ಕರಿಸುವ ಸುಯೋಗ ದೊರಕಿರುವುದು ನಮ್ಮೆಲ್ಲರ ಪೂರ್ವಜನ್ಮದ ಪುಣ್ಯ. ❑

## ಶ್ರೀವಾಣಿ

ಆಗಿನವರಲ್ಲಿ ರಾಷ್ಟ್ರಭಕ್ತಿ ಇತ್ತು. ರಾಷ್ಟ್ರ ಕಟ್ಟುವ
ಮಹತ್ತರವಾದ ಆಕಾಂಕ್ಷೆಯಿತ್ತು. ಸ್ವಾರ್ಥವಿರಲಿಲ್ಲ.
ರಾಷ್ಟ್ರ ... ರಾಷ್ಟ್ರ .... ರಾಷ್ಟ್ರ .... ಎಂದು
ತುರಂಗವಾಸವನ್ನೇ ಅನುಭವಿಸಿ
ಮಹಾತ್ಯಾಗವನ್ನೇ ಮಾಡಿದರು. ಸ್ವಾತಂತ್ರ್ಯತರುವ
ಉದಾತ್ತವಾದ ಮಹೋತ್ತರ ಧ್ಯೇಯವಿತ್ತು.
ನಾವು, ನಮ್ಮ ಕುಟುಂಬ ಅನ್ನೋ ಪ್ರಶ್ನೆಯೇ
ಅವರಲ್ಲಿರಲಿಲ್ಲ. ಸ್ವಾತಂತ್ರ್ಯ ಬಂದ ಮೇಲೆ
ಸ್ವಾರ್ಥ ಪ್ರವೇಶಿಸಿತು.

* * *

"ಮನುಷ್ಯ ಹೇಡಿಯಾಗಬಾರದು.
ಆತ್ಮವಿಶ್ವಾಸವುಳ್ಳವನಾಗಬೇಕು. ಒಂದಕ್ಕೆ ಹತ್ತು
ಮಾಡುತ್ತೇನೆ ಎಂಬ ನಿಷ್ಠೆಯಿರಬೇಕು"
ಎಂಬ ನಮ್ಮ ಪೂಜ್ಯ ಗುರುಗಳ ವಾಣಿ ನಮ್ಮ
ಜೀವನದ ಧ್ಯೇಯ.



# ಶ್ರೀಮಠದಲ್ಲಿ ಹತ್ತು ಸಾವಿರ ಜ್ಯೋತಿಗಳ ಮಹಾಸಂಗಮ

- ಯು. ಸಿರಾಜ್ ಅಹಮದ್ ಸೊರಬ *

ಸೂರ್ಯ ಚಂದ್ರರಿರುವ ತನಕ, ಭುವಿಯಲ್ಲಿ ಸತ್ಯವಿಶ್ವಾಸಿಗಳು ನಿಜಶರಣರು ಹುಟ್ಟುತ್ತಿರುತ್ತಾರೆ. ಮಾನವತೆಯ ಉತ್ಥಾನಕ್ಕಾಗಿ, ಲೋಕ ಕಲ್ಯಾಣಕ್ಕಾಗಿ, ಮಹಾಪುರುಷರು ಲೋಕವಾನ್ಯ ಜಂಗಮರು ಅವತರಿಸುತ್ತಿರುತ್ತಾರೆ, ತ್ರಿವಿಧ ದಾಸೋಹಿ, ಧ್ಯೇಯತಪಸ್ವಿ ಸಿದ್ಧಪುರುಷ, ವಿಶ್ವಮಾನವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ನಿಸ್ವಾರ್ಥ, ಪರಿಶುದ್ಧ ಸೇವೆಗಳಿಂದ ತ್ರಿವಿಧ ದಾಸೋಹಗಳ ಶ್ರೇಷ್ಠ ಕಾಯಕಗಳಿಂದ ಶ್ರೀ ಸಿದ್ಧಗಂಗಾ ಮಠವು ಆಧ್ಯಾತ್ಮದ ಮಹಾಮನೆಯಾಗಿ, ಭಕ್ತಿಭಾವಗಳ, ಜ್ಞಾನವಿಜ್ಞಾನಗಳ ಸಾಗರವಾಗಿ, ಸ್ನೇಹ, ಸೌಹಾರ್ದ, ಭಾವೈಕ್ಯತೆಗಳ ಮಹಾಸಂಗಮವಾಗಿ, ರಾಜ್ಯ ರಾಜ್ಯ ಗಡಿಗಡಿಗಳನ್ನು ದಾಟಿ, ವಿಶ್ವದೆಲ್ಲೆಡೆಯಲ್ಲಿ ತನ್ನ ಕೀರ್ತಿಯನ್ನು ಹೆಚ್ಚಿಸಿಕೊಂಡಿದೆ.

ನಮ್ಮ ಕರುನಾಡಿನಲ್ಲಿ ಹಲವಾರು ರಾಜ್ಯ, ದೇಶಗಳ, ಧರ್ಮಭಾಷೆಗಳ ಜನರು ಅನ್ನ ಆಶ್ರಯಗಳನ್ನು ಹುಡುಕಿಕೊಂಡು ಬಂದು ಸಂತೃಪ್ತ ಜೀವನ ನಡೆಸುತ್ತಿದ್ದಾರೆ. ಅವರಿವರೆಂಬ ಭೇದಗಳಿಲ್ಲದೇ ಕನ್ನಡ ಪುಣ್ಯಭೂಮಿ, ಸರ್ವರನ್ನೂ ತನ್ನ ಕರುಣೆಯ ಮಡಿಲಿನಲ್ಲಿ ಪೋಷಿಸುತ್ತಿದೆ. ಇಂತಹ ಪವಿತ್ರ ಕರುನಾಡಿನ ಪುಣ್ಯಕ್ಷೇತ್ರವೇ ತುಮಕೂರು ಜಿಲ್ಲೆಯ ಶ್ರೀ ಸಿದ್ಧಗಂಗಾ ಮಠ ಎಂದು ಹೇಳಲು ಅಭಿಮಾನವೆನಿಸುತ್ತದೆ.

ಹನ್ನೆರಡನೇ ಶತಮಾನದಲ್ಲಿ ಬಸವಾದಿ ಶರಣರು ಸಾರಿದಂತಹ ತತ್ತ್ವಚಿಂತನೆಗಳು ಎಂದೆಂದಿಗೂ ಸನ್ಮಾರ್ಗ ರಶ್ಮಿಗಳಾಗಿ, ದಾಸೋಹಗಳ ಪ್ರಖರಜ್ಯೋತಿಗಳಾಗಿ ಬೆಳಗುತ್ತಾ ಕೋಟ್ಯಾನುಕೋಟಿ ಮಾನವರಿಗೆ ಅನ್ನ, ಆಶ್ರಯ, ಜ್ಞಾನ, ಧ್ಯಾನ, ಯೋಗಗಳನ್ನು ಧಾರೆಯೆರೆಯುತ್ತಾ ಜನಮಾನಸಗಳನ್ನು ಹಸನಾಗಿಸುತ್ತಿವೆ. ಶರಣ ಕ್ರಾಂತಿಯ ಮಹಾನ್ ತೋಟಗಳಲ್ಲರಳಿದ, ಸಿದ್ಧಿ, ಸಾಧನೆ, ಸಮತೆ, ಸ್ವೈರಣೆ, ಮಾನವತೆಗಳ ಸುವರ್ಣಪುಷ್ಪಗಳು, ಶಾಂತಿ, ಸಹನೆ, ಸೌಹಾರ್ದತೆ, ಸಹಿಷ್ಣುತೆ, ಸಹಬಾಳ್ವೆಗಳ ದಿವ್ಯಸುಗಂಧಗಳನ್ನು ಚೆಲ್ಲುತ್ತಾ ಬ್ರಹ್ಮಾಂಡದಲ್ಲಿ ವಿಶ್ವಭ್ರಾತೃತ್ವದ ರಮ್ಯಕಾಂತಿಯನ್ನು ಹರಡಿಸುತ್ತಿವೆ. ಇಂತಹ ಶಾಂತಿಯ, ಕ್ರಾಂತಿಯ, ಕಾಂತಿಯ ಶ್ರೀ ಸಿದ್ಧಗಂಗಾ ಮಠದಂಗಳದಲ್ಲರಳಿದ ಬ್ರಹ್ಮಪುಷ್ಪವೇ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ. ಅತ್ಯುನ್ನತ ಸಂಸ್ಕೃತಿ, ಸಂಸ್ಕಾರಗಳ ಅವಿಭಕ್ತ ಕುಟುಂಬದಲ್ಲಿ ಶ್ರೀ ಪಟೇಲ್ ಹೊನ್ನಪ್ಪ ಮತ್ತು ಶ್ರೀಮತಿ ಗಂಗಮ್ಮ ದಂಪತಿಗಳ ಹದಿಮೂರು ಮಕ್ಕಳಲ್ಲಿ ಕೊನೆಯ ಮಗನಾಗಿ ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ವೀರಾಪುರ ಗ್ರಾಮದಲ್ಲಿ ಏಪ್ರಿಲ್ ೧, ೧೯೦೮ ರಂದು ಶ್ರೀಗಳ ಜನನವಾಯಿತು.

ಮಗನನ್ನು ಉನ್ನತಾಧಿಕಾರಿಯಾಗಿಸುವ, ಒತ್ತಾಸೆಯ ಹೆತ್ತವರಿಗಿತ್ತಾದರೂ ಶ್ರೀಗಳ ಪುಣ್ಯಹಸ್ತಗಳ ದಿವ್ಯಸ್ಪರ್ಶದ ಹಸನಾಗಿ, ತ್ರಿವಿಧ ದಾಸೋಹದಾಗರವಾಗಿ, ಪ್ರಜ್ವಲಿಸುವ ಮಹದಾಸೆಯ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕಿತ್ತು, ೧೯೩೦ ಮಾರ್ಚ್ ೩ ರಂದು ಶ್ರೀ ಉದ್ದಾನ ಶಿವಯೋಗಿಗಳ ಕೃಪೆಯಿಂದ ಮಠಾಧ್ಯಕ್ಷರಾಗಿ ಜಂಗಮ ದೀಕ್ಷೆಯನ್ನು ಪಡೆದರು. ಪದವಿಯ ಮೂರನೇ ವರ್ಷದ ವ್ಯಾಸಂಗವನ್ನು ಅರ್ಧಕ್ಕೆ ನಿಲ್ಲಿಸಿದ್ದ ಶ್ರೀಗಳು ೧೯೩೦ ಏಪ್ರಿಲ್ ಮೂರನೇ ವರ್ಷದ ಪರೀಕ್ಷೆಯನ್ನು ಬರೆದು ಅಗ್ರಶ್ರೇಣಿಯಲ್ಲಿ ಪಾಸಾದರು. ನಂತರ ತಮ್ಮ ಅತ್ಯಮೂಲ್ಯವಾದ ಜ್ಞಾನಸಂಪತ್ತನ್ನು ಮಠದ ಸೇವೆಗಾಗಿಯೇ ಮೀಸಲಾಗಿಟ್ಟು ಕಾಯಕ ದಾಸೋಹದಲ್ಲಿ ತಮ್ಮನ್ನು ಅರ್ಪಿಸಿಕೊಂಡರು.

ಬಸವಾದಿ ಶರಣರು ಬಯಸಿದಂತೆ, ಸಕಲ ಜೀವಾತ್ಮಗಳ ಲೇಸನ್ನೇ ಬಯಸಿದ ಶ್ರೀಗಳು, ಸಕಲ ಮನುಜರನ್ನೂ ಶಾಂತಿ ಸದ್ಭಾವನೆಗಳ ಮೂಲಕ ಆಧ್ಯಾತ್ಮದ ಮಂಟಪದಲ್ಲಿ, ಮಾನವತೆಯ ಮಂದಿರದಲ್ಲಿ ಅಖಂಡಗೊಳಿಸುವ ಶ್ರೇಷ್ಠ ಕಾಯಕಗಳನ್ನೇ ಮಾಡುತ್ತಿದ್ದಾರೆ. ಸರ್ವಧರ್ಮ, ಭಾಷೆಗಳ ಗೌರವಾದರಗಳನ್ನು ಹೊಂದಿರುವ ಶ್ರೀಗಳು ಬಹುಮುಖ ಪ್ರತಿಭೆಗಳ ಮಹಾನ್ ಸಂತರು, ತತ್ತ್ವಜ್ಞಾನಿ, ಸಾಹಿತಿ, ಮೇಧಾವಿ, ದಾರ್ಶನಿಕರೂ ಆದಂತಹ ಶ್ರೀಗಳು ಬಹುಭಾಷಾ ಪಂಡಿತರು, ತಮಗೆ ದೈವದತ್ತವಾಗಿ ಬಂದಂತಹ ಪ್ರತಿಭೆಗಳೆಲ್ಲಾ ತ್ರಿವಿಧ ದಾಸೋಹಗಳಿಗಾಗಿಯೇ ಮುಡಿಪಾಗಿಟ್ಟಿದ್ದಾರೆ. ಇದರ ಫಲವಾಗಿಯೇ, ಮಠದ ಆಶ್ರಯದಡಿಯಲ್ಲಿ ವಿವಿಧ ಗ್ರಾಮ, ಪಟ್ಟಣ, ಜಿಲ್ಲೆಗಳಲ್ಲಿ ನೂರ ಇಪ್ಪತ್ತೈದಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳು ಸ್ಥಾಪಿತಗೊಂಡಿವೆ.





ಜಾತಿ, ಕುಲಗೋತ್ರಗಳ ತಾರತಮ್ಯಗಳಿಲ್ಲದೇ ಶ್ರೀಗಳ ಮಠದಲ್ಲಿಂದು, ಅನ್ನ, ವಸತಿ, ಜ್ಞಾನ, ಧ್ಯಾನ ಯೋಗಗಳಿಂದ ಸಂಸ್ಕರಿಸಲ್ಪಟ್ಟ ಹತ್ತು ಸಾವಿರಕ್ಕೂ ಅಧಿಕ ಮಕ್ಕಳು, ಆಧ್ಯಾತ್ಮದ ಗುಡಿಗಳಾಗಿ ಪ್ರಜ್ವಲಿಸುತ್ತಿದ್ದಾರೆ. ಗುಲಾಬಿ ವರ್ಣದ ಸಮವಸ್ತ್ರದಲ್ಲಿ ಸಾಲು ಸಾಲಾಗಿ ನಿಂತು, ಶಿಸ್ತಿನ ಸಿಪಾಯಿಗಳಾಗಿ ಧ್ಯಾನದಲ್ಲಿ ಮಗ್ನರಾಗುವ ರಮಣೀಯ ದೃಶ್ಯವು ಭಾರತದ ಭಾವೈಕ್ಯತೆಯ ಮಹಾಸಂಗಮದ ಸಾಕ್ಷಿಯಾಗಿದೆ. ಭಾರತವು ಬ್ರಹ್ಮಾಂಡದಲ್ಲಿ ಶ್ರೇಷ್ಠಾತಿಶ್ರೇಷ್ಠ ಸಂಸ್ಕೃತಿ ಸಂಸ್ಕಾರಗಳಿಂದ ಮಾದರೀ ರಾಷ್ಟ್ರವಾಗಿ ಬೆಳಗಬೇಕೆಂಬ ಹೆಬ್ಬಯಕೆ ಶ್ರೀಗಳಿಗೆ ಇರುವುದರಿಂದಲೇ, ತಮ್ಮ ಜಪ, ತಪ, ವ್ರತ, ಯೋಗ, ಸಿದ್ಧಿ, ಸಾಧನೆಗಳ ಸುಸಜ್ಜಿತ ಸಾಧನಗಳಿಂದ ಆಧ್ಯಾತ್ಮವೆಂಬ ಮಹಾಸಾಗರದಾಳಕ್ಕಿಳಿದು ಅತ್ಯಮೂಲ್ಯವಾದ ಮುತ್ತುರತ್ನಗಳನ್ನು ಶೋಧಿಸಿ ತೆಗೆದು ಸುಜ್ಞಾನವೆಂಬ ವಿಶೇಷ ಕಲೆಯಿಂದ ಕುಸುರಿಯನ್ನು ಮಾಡಿ, ಅನುಭಾವಿಗಳ ವಚನಾಮೃತವನ್ನು ಕುಡಿಸಿ, ಸುಸ್ಪಷ್ಟವಾದ ರೂಪರೇಷೆಗಳನ್ನು ಕೊಟ್ಟು ತಯಾರಿಸಿದ, ಶ್ರೀಗಳ ಮಹಾಮನೆಯಲ್ಲಿ ತರಬೇತಿಯನ್ನು ಪಡೆದ ಅದೃಷ್ಟವಂತ ವಿದ್ಯಾರ್ಥಿಗಳು, ಭಕ್ತಿಭಾವ, ಉನ್ನತಜ್ಞಾನಗಳ ಕಿರಣಗಳಿಂದ ಸುತ್ತಮುತ್ತಲಿನ ಪರಿಸರವನ್ನು ಹಸನಾಗಿಸುವ, ಅಜ್ಞಾನದ ಕತ್ತಲೆಗಳನ್ನು ಸರಿಸಿ ಪ್ರಜೆಗಳ ಮನಮಸ್ತಕಗಳಲ್ಲಿ ಸುಜ್ಞಾನದ ನವಚೇತನವನ್ನು ತುಂಬಿ ವಿಶ್ವಮಾನವತೆ, ಸ್ನೇಹ ಸೌಹಾರ್ದತೆಗಳ ಬೆಳಕನ್ನು ಚೆಲ್ಲುವ ನಕ್ಷತ್ರಪುಂಜಗಳು, ಚೈತನ್ಯದ ಚಿಲುಮೆಗಳು. ಇಂತಹ ನಕ್ಷತ್ರಗಳನ್ನು ತಯಾರಿಸಿದಂತಹ ಗುರುಜಂಗಮದ ಗುಣವೈಶಿಷ್ಟತೆಗಳು ಎಂತಹ ಉಚ್ಚಸ್ತರದಲ್ಲಿರಬಹುದು ಕೊಂಚ ಯೋಚಿಸಿ. ತನ್ನ ಸಂಪೂರ್ಣ ಬದುಕನ್ನೇ ಸಮಾಜ ಸೇವೆಗಾಗಿ, ಮಾನವ ಕಲ್ಯಾಣಕ್ಕಾಗಿ, ಸವೆಸುತ್ತಿರುವ ಕರ್ಮಯೋಗಿಗಳು. ಅದೆಷ್ಟೋ ನೊಂದ ಜೀವಿಗಳಿಗೆ ಬಡವ ನಿರ್ಗತಿಕರಿಗೆ ಅನ್ನ, ಆಶ್ರಯ, ಜ್ಞಾನಗಳನ್ನು ದಯಪಾಲಿಸುತ್ತಾ ಹತ್ತು ಸಾವಿರಕ್ಕೂ ಅಧಿಕ ಜ್ಯೋತಿಗಳ (ವಿದ್ಯಾರ್ಥಿಗಳು) ಸಂಕೀರ್ಣತೆಗೆ ಕಟಿಬದ್ಧರಾಗಿರುವ, ಮಹಾನ್ ಯೋಗಿ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಉಚ್ಚ, ನೀಚ, ಬಡವ, ಬಲ್ಲಿದ, ದಲಿತ, ಬ್ರಾಹ್ಮಣ, ಸಿಖ್, ಕ್ರೈಸ್ತ, ಹಿಂದೂ, ಮುಸ್ಲಿಮ್‌ಗಳೆಂಬ ಭೇದಗಳಿಲ್ಲದೆ ಸರ್ವ ಜನಾಂಗದವರನ್ನು ಸಮಾನ ದೃಷ್ಟಿಯಿಂದ ಕಾಣುವ, ಮಾತೃ ಹೃದಯಿ, ವಿಶ್ವಚೇತನ, ಸಮತೆಯ ದನಿ, ಔದಾರ್ಯಗಳ ಗಣಿ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ಬಹುಭಾಷಾಜ್ಞಾನಿಯಾಗಿ ಜಗದ ಪ್ರಸ್ತುತ ಪರಿಸ್ಥಿತಿಗಳ ಆಳವಾದ ಅಧ್ಯಯನ ಮಾಡಿದ ಶ್ರೀಗಳು ರಾಷ್ಟ್ರದ, ರಾಜ್ಯದ ಮಹಾನ್ ಚೇತನಗಳು ಮಠಕ್ಕೆ ಬಂದು ಆಶೀರ್ವಾದ ಪಡೆದಿದ್ದಾರೆ. ಶ್ರೀಗಳ ಮನಮಸ್ತಕಗಳು ಅರಿವಿನ ಆಗರಗಳೇ ಆಗಿದ್ದರೂ, ಅಹಂ, ದಾಸೋಹ ಸೇವೆಗಳ ಮಡಿವಂತಿಕೆ ಶ್ರೀಗಳ ಹತ್ತಿರವೂ ಸುಳಿಯಲಿಲ್ಲ, ಸುಳಿಯುವುದೂ ಇಲ್ಲ. ಹಲವು ಧರ್ಮ ಸಂಸ್ಕೃತಿಗಳ ಅರಿವಿಗಾಗಿ ಶ್ರೀಗಳು. ವಿವಿಧ ಪಂಥಗಳಿಗೆ ಸೇರಿದ ಧರ್ಮಗುರುಗಳನ್ನು ಮಠಕ್ಕೆ ಆಹ್ವಾನಿಸಿದ್ದಾರೆ, ಗೌರವಿಸಿದ್ದಾರೆ.

ಕ್ಷುಲ್ಲಕ ವಿಷಯಗಳಲ್ಲಿ ಪ್ರಜೆಗಳನ್ನು ಕಚ್ಚಾಡಿಸಿ, ಒಂದು ಸುಳ್ಳನ್ನು ಸಾವಿರ ಸಲ ಹೇಳಿ ಸತ್ಯವನ್ನಾಗಿಸಿ, ಮನ ಮನೆಗಳನ್ನು ಮುರಿದು, ರಂಗುರಂಗಿನ ಮುಖವಾಡಗಳನ್ನು ಧರಿಸಿ, ಸಮಾಜದ ಕ್ಷೋಭೆಗಳನ್ನು ಹರಡಿಸುವ ಕಿಡಿಗೇಡಿಗಳಿಗೆ ಶ್ರೀಗಳ ದಾಸೋಹ ಕಾರ್ಯಗಳು, ಔದಾರ್ಯ ಗುಣಗಳು ಶಾಂತಿ, ಸೌಹಾರ್ದತೆ, ಏಕತೆಗಳ ಪಾಠವಾಗಲಿ. ಸಂಕುಚಿತ ಜನರ ಅಂತರಾಳಗಳು ಮಾನವೀಯತೆಯ ವಿಶಾಲಗುಣಗಳಿಗಾಗಿ ತೆರೆದುಕೊಳ್ಳಲಿ. ಬಾವಿಯನ್ನೇ ತಮ್ಮ ಜಗತ್ತು ಎಂದು ತಿಳಿದು ಹೊರ ಜಗತ್ತು ಕಾಣದ ಮಂಡೂಕಗಳಂತೆ ಬದುಕುವ ಬದಲು ಮಹಾಸ್ವಾಮಿಗಳ ಹೃದಯ ವೈಶಾಲ್ಯತೆಗಳಿಂದ ಪ್ರಭಾವಿತರಾಗಿ ಕುಲಗೋತ್ರ, ಜಾತಿ ಮತಗಳ ದ್ವೇಷಾಸೂಯೆಗಳಿಂದ ಹೊರಬಂದು ಭವ್ಯ ದಿವ್ಯ, ಪುಣ್ಯ ಭಾರತದ ಪ್ರಗತಿಗಾಗಿ ಶ್ರಮಿಸೋಣ, ಶ್ರೀಗಳ ತತ್ತ್ವಾಸಿದ್ಧಾಂತಗಳಿಂದ ಕುವೆಂಪುರವರು ಹೇಳಿದಂತೆ, ಸರ್ವಜನಾಂಗದ ಶಾಂತಿಯ ತೋಟವಾಗಿ ರಸಿಕರ ಕಂಗಳ ಸೆಳೆಯುವ ದಿವ್ಯನೋಟವಾಗಲಿ.

### ಶ್ರೀವಾಣಿ

ಸೃಷ್ಟಿಯಲ್ಲಿ ಹುಟ್ಟುವ ಪ್ರತಿಯೊಂದು ಜೀವಿಯೂ ಅನುಭವಿಸಬೇಕಾದ ಒಂದು ಅನಿವಾರ್ಯ ಘಟನೆ. ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಆದರೆ ಅದಕ್ಕೆ ಸಾರ್ಥಕತೆಯನ್ನು ತಂದುಕೊಡುವ ಪ್ರಯತ್ನ ಪವಿತ್ರವಾದುದು. ಹುಟ್ಟು ಸಾವಿನ ಮಧ್ಯೆ ಇರುವ ಬಾಳು ಅದನ್ನು ನಿರ್ಧರಿಸುತ್ತದೆ; ನಿರ್ಧರಿಸಬೇಕು. ಬಾಳು ಕೇವಲ ಉಂಡು, ಉಟ್ಟು, ನಿದ್ದೆಗೈದು ಕಳೆದು ಹೋಗಲಿಕ್ಕಿಲ್ಲ, ಪ್ರತಿಯೊಂದು ಜೀವಿಯ ಹುಟ್ಟಿಗೂ ಒಂದು ಉದ್ದೇಶವಿದ್ದೆ ಇರುತ್ತದೆ. ಅದನ್ನು ತಿಳಿದು ಬಾಳುವ ಕಲೆಯನ್ನು ಅರಿತು ಜೀವಿಸುವ ಜಾಣ್ಮೆಬೇಕು. ನೂರು ವರ್ಷ ಲೋಕ ಕಂಟಕವಾಗಿ ಬಾಳುವುದಕ್ಕಿಂತ ಮೂರು ವರ್ಷ ಲೋಕೋಪಕಾರಿಯಾಗಿ ಬಾಳುವ ಗುರಿ ನಮ್ಮದಾಗಬೇಕು.



# ನಾ ಕಂಡಂತೆ ಗುರುದೇವ

– ಡಾ. ಶಾಲಿನಿ ಎಂ. *

"**ನಾ** ಕಂಡಂತೆ ನನ್ನ ಗುರುದೇವ" ಇದು ಸೋದರಿ ನಿವೇದಿತ ಗುರು ವಿವೇಕಾನಂದರ ಬಗ್ಗೆ ಬರೆದ ಪುಸ್ತಕ. ಪ್ರಾಥಮಿಕ ಶಾಲೆಯ ಬೇಸಿಗೆಯ ರಜಾದಿನಗಳಲ್ಲಿ ನಾವು ಮೂರು ಸಹೋದರಿಯರು, ಕಡ್ಡಾಯವಾಗಿ ಇಂತಹ ಪುಸ್ತಕಗಳನ್ನು ಓದಿ ಅಮ್ಮನಿಗೆ ಒಪ್ಪಿಸಬೇಕಾಗಿತ್ತು. ಆ ದಿನಗಳಲ್ಲಿ ನನ್ನನ್ನು ಬಹಳವಾಗಿ ಕಾಡಿದ್ದು ಈ ಪುಸ್ತಕ. ನಾನು ನನ್ನ ಗುರುವಿನ ಬಗ್ಗೆ ಬರೆಯಬೇಕೆಂದು ಅಂದು ಭಾವಿಸಿದ್ದು, ಇಂದು ಕೈಗೂಡುತ್ತಿರುವುದು ನನ್ನ ಸುಕೃತವೇ ಸರಿ.

ನನ್ನ ಸದ್ಗುರು ಭವರೋಗ ವೈದ್ಯರು, ಕರುಣಾಮಯಿ, ಮಮತಾಮಯಿ, ಮಾತೃಹೃದಯಿ, ಸದಾ ಸಮಾಜದ ಒಳಿತನ್ನೇ ಬಯಸುವ ಶಿವಚೇತನ, ನಿರಂಜನ, ಪ್ರಣವಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ನಮ್ಮ ಅಮ್ಮ ಹೇಳುವಂತೆ, ಹುಟ್ಟಿದ ತಕ್ಷಣ ರಕ್ತವಾಂತಿ ಮಾಡುತ್ತಿದ್ದ ನಾನು ಉಳಿದಿದ್ದು ಶಿವ ಸ್ವರೂಪಿಗಳಾದ ವೈದ್ಯರ ಕರುಣೆಯಿಂದ. ಅಂದೇ ಅಮ್ಮ ಸಂಕಲ್ಪಿಸಿದ್ದಳು. **"ಈ ಮಗು ಬೇರೆಯವರ ಕರುಣೆಯಿಂದ ಬದುಕಿದೆ, ಹಾಗೆ ಇವಳು ಬೇರೆಯವರ ಜೀವ ಉಳಿಸುವ ವೈದ್ಯಳಾಗಬೇಕೆಂದು."**

ನನ್ನ ಮನೆ ಶ್ರೀಮಠದಿಂದ ಕೇವಲ ೫ ಕಿಲೋ ಮೀಟರ್. ನಮ್ಮ ಮನೆಯಲ್ಲಿ ಯಾವ ಕಾರ್ಯಕ್ರಮವಾದರೂ ಸರಿ, ಅದು ಒಂದು ಶಾಲೆಯ ಪರೀಕ್ಷೆಯೇ ಆಗಲಿ, ಅಥವಾ ಮನೆ ಕಟ್ಟುವ ದೊಡ್ಡ ಕಾರ್ಯವೇ ಆಗಲಿ, ಶ್ರೀಮಠದ ಆಶೀರ್ವಾದ ಬೇಡಿಯೇ ಪ್ರಾರಂಭಿಸುವುದು. ಹಾಗೆಯೇ ಕೆಲಸದ ನಂತರ ಮತ್ತೊಮ್ಮೆ ಅಲ್ಲಿ ಹೋಗಿ ಕೃತಜ್ಞತೆ ಸಲ್ಲಿಸಲೇಬೇಕು.

ಚಿಕ್ಕಂದಿನಲ್ಲಿ ಸ್ವಾಮೀಜಿಗಳನ್ನು ಕಂಡರೆ ಬಹಳ ಭಯ, ಭಕ್ತಿ. ಯಾವಾಗಲೂ ಅಮ್ಮನ ಸೆರಗು ಅಥವಾ ಅಪ್ಪಾಜಿಯ ಪಂಚೆ ಹಿಡಿದು ಹಿಂದೆ ನಿಲ್ಲುತ್ತಿದ್ದ ನೆನಪು. ಆಗೊಮ್ಮೆ, ಈಗೊಮ್ಮೆ ಸ್ವಾಮೀಜಿ "ಯಾವ ಶಾಲೆ ? ಯಾವ ತರಗತಿ, ಪರೀಕ್ಷೆ ಯಾವಾಗ ?" ಎಂದು ಕೇಳಿದರೆ ಪ್ರಪಂಚವನ್ನೇ ಗೆದ್ದಷ್ಟು ಸಂತೋಷ. ವಾಪಸ್ಸು ಬಂದು ಗೆಳೆಯರ ಹತ್ತಿರ ಹೆಮ್ಮೆಯಿಂದ "ಸ್ವಾಮೀಜೀ ಇಂದು ನನ್ನನ್ನು ಮಾತನಾಡಿಸಿದರು" ಎಂದು ಜಂಭದಿಂದ ಹೇಳುತ್ತಿದ್ದದ್ದು ಇನ್ನೂ ನೆನಪಿದೆ.

ನಾನು ಬೆಳೆದಂತೆ ಶ್ರೀಮಠದ ಸಾನ್ನಿಧ್ಯ ಹೆಚ್ಚುತ್ತಾ ಹೋಯಿತು. ವಾರಾಂತ್ಯದಲ್ಲಿ ಸಂಜೆಯ ಪ್ರಾರ್ಥಣೆಯಲ್ಲಿ ಭಾಗವಹಿಸುವುದು, ಶ್ರೀಮಠದಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಭಾಗಿಯಾಗುವುದು ವಾಡಿಕೆಯಾಯಿತು. ಶ್ರೀಗಳ ಆಶೀರ್ವಾದದಿಂದ ಮೆಡಿಕಲ್ ಸೀಟು ಸಿಕ್ಕಿತು. ಎಂ.ಡಿ.ಯೂ ಆಯಿತು. ಎಲ್ಲಾ ದಿನಗಳ ಶುರು ಮತ್ತು ಅಂತ್ಯ ಗುರುಗಳು, ಅಮ್ಮ ಅಪ್ಪಾಜಿಯವರ ಭಾವಚಿತ್ರಗಳಿಗೆ ನಮಿಸುವುದರಿಂದ ಆಗುತ್ತಿತ್ತು. ಸದ್ಗುರುವಿನ ಆಶೀರ್ವಾದ ನನ್ನ ವ್ಯಕ್ತಿತ್ವವನ್ನು ರೂಪಿತಗೊಳಿಸುತ್ತಿತ್ತು. ವೈದ್ಯಳಾಗಿ ನಾನು ಅವರಿಂದ ಕಲಿಯುತ್ತಿರುವ ಗುಣಗಳು.

**೧. ಮಾತೃವಾತ್ಸಲ್ಯ** – ಶ್ರೀಮಠದ ಭಕ್ತರೆಲ್ಲರಿಗೂ ಶ್ರೀಗಳು ಪ್ರೀತಿಯ ತಾಯಿ, ಜಾತಿ, ಮತ, ಆಸ್ತಿ, ಅಂತಸ್ತು, ಗಂಡು, ಹೆಣ್ಣು ಯಾವ ಭೇದವಿಲ್ಲದೆ ಎಲ್ಲರನ್ನೂ ಪ್ರೀತಿಸುವ ಅವರ ಗುಣ, ವೈದ್ಯರಾಗಿ ನಮ್ಮಲ್ಲಿರಬೇಕು. ಇಲ್ಲಿ ನನಗೆ ಒಂದು ಸಂದರ್ಭ ನೆನಪಾಗುತ್ತಿದೆ. ಆಗಷ್ಟೇ ಕೆಲಸಕ್ಕೆ ಸೇರಿದ್ದೆ. ನಾನು ಕೆಲಸ ಮಾಡುವ ಆಸ್ಪತ್ರೆ ನನ್ನ ಮನೆಯಿಂದ ೧೦ ಕಿಲೋಮಿಟರ್ ದೂರದಲ್ಲಿತ್ತು. ಗುರುವಿನ ಲಕ್ಷಾಂತರ ಭಕ್ತರಲ್ಲಿ ನಾನು ಒಬ್ಬಳು. ಒಮ್ಮೆ ನಾನು ಅವರ ಆಶೀರ್ವಾದ ಪಡೆಯಲು ಹೋದಾಗ ಅವರು ನನ್ನನ್ನು **"ಅಷ್ಟು ದೂರ ಕೆಲಸಕ್ಕೆ ಹೋಗುವೆ, ಮಧ್ಯಾಹ್ನ ಊಟಕ್ಕೆ ಏನು ಮಾಡುವೆ"** ಎಂದು ಕೇಳಿದರು. ಇಂಥಹ ಕರುಳು ತಾಯಿಯದ್ದೇ ತಾನೆ.

**೨. ಆಗಾಧ ತಾಳ್ಮೆ** – ಸದ್ಗುರುವಿನಲ್ಲಿ ಕಂಡ ಮತ್ತೊಂದು ಗುಣ ಅಪಾರ ತಾಳ್ಮೆ. ಇದು ಪ್ರತಿಯೊಂದು ವೈದ್ಯಳಿಗೂ ಇರಲೇಬೇಕಾದ ಗುಣ. ಶ್ರೀಗಳು, ಬರುವ ಎಲ್ಲ ಭಕ್ತರ ಕಷ್ಟ, ಸುಖಗಳನ್ನು ಪ್ರೀತಿಯಿಂದ ಆಲಿಸಿ, ಅವರಿಗೆ ತಕ್ಕುದಾದ ಪರಿಹಾರ ಸೂಚಿಸುತ್ತಾರೆ. ಈ ಸಂಗತಿ ನನ್ನ ಹಿರಿಯರಿಂದ ಕೇಳಿದ್ದು. ಒಂದು ಹಳ್ಳಿಯಲ್ಲಿ ಎರಡು ಪಂಗಡಗಳ ನಡುವೆ ಜಗಳ ನಡೆಯುತ್ತಿತ್ತು. ಜಗಳ ಪರಿಹರಿಸಲು ಊರಿನ ಹಿರಿಯರು ಶ್ರೀಗಳನ್ನು ಪ್ರಾರ್ಥಿಸಿದರು. ಎರಡೂ ಗುಂಪಿನ ವಾದ ವಿವಾದಗಳನ್ನು ಶ್ರೀಗಳು ಮೌನವಾಗಿ ಕೇಳಿಸಿಕೊಳ್ಳುತ್ತಿದ್ದರಂತೆ. ಘಂಟೆಗಳು ಕಳೆದರೂ ಜಗಳ ಬಗೆಹರಿಯಲಿಲ್ಲ. ಹಿರಿಯರಿಗೇ ಬೇಸರವಾಗಿ ಸ್ವಾಮೀಜಿಗಳನ್ನು ಪೂಜೆ, ಪ್ರಸಾದಕ್ಕೆ ದಯಮಾಡಿಸಲು ಕೇಳಿಕೊಂಡರಂತೆ. ಆಗ ಬುದ್ಧಿಗಳು "ಅಕ್ಕಿ ಕೊತ, ಕೊತ ಕುದ್ದರೇ

* ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ವೈದ್ಯಕೀಯ ವಿಭಾಗ, ಶ್ರೀದೇವಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನ ಆಸ್ಪತ್ರೆ, ತುಮಕೂರು





ಅನ್ನವಾಗುವುದು. ತಾಳ್ಮೆಯಿಂದಿರು" ಎಂದರಂತೆ. ಪವಾಡವೆಂಬಂತೆ, ಅವರು ಹೇಳಿದಂತೆ, ಆ ಎರಡೂ ಗುಂಪು ಒಪ್ಪಂದಕ್ಕೆ ಬಂದು, ನಾವೆಂದೂ ಜಗಳವಾಡುವುದಿಲ್ಲ ಎಂದು ಸ್ವಾಮಿಗಳ ಪಾದಕ್ಕೆ ನಮಸ್ಕರಿಸಿ ಎಲ್ಲರೂ ಒಟ್ಟಿಗೆ ಪೂಜೆ, ಪ್ರಸಾದ ಮಾಡಿದರಂತೆ. ಹೀಗಿರಬೇಕಲ್ಲವೇ ತಾಳ್ಮೆಯೆಂದರೆ. ನಾವು ವೈದ್ಯರು ರೋಗಿ ಹೇಳುವುದನ್ನೆಲ್ಲಾ ಕೇಳಬೇಕು. ನಾವುಗಳು ಇದನ್ನು ಪ್ರೀತಿಯಿಂದ ಮಾಡಿದರೆ ರೋಗಿಗಳ ಖಾಯಿಲೆ ಮುಕ್ಕಾಲು ವಾಸಿಯಾಗುತ್ತದೆ. ವೈದ್ಯರಿಗೆ ನಮ್ಮ ಮೇಲೆ ಎಷ್ಟೊಂದು ಕಾಳಜಿ, ಕಳಕಳಿ, ಖಂಡಿತ ಇವರು ನಮ್ಮ ರೋಗ ವಾಸಿ ಮಾಡುತ್ತಾರೆ ಎಂದು ನಂಬುತ್ತಾರೆ.

**೩. ಅಚಲ ಮನಸ್ಸು** – ವೈದ್ಯರು ಎಂಥಹ ಸಂದರ್ಭಗಳಲ್ಲೂ ಧೃತಿಗೆಡಬಾರದು. ಆಗ ತಾನೆ ಹುಟ್ಟಿದ ಮಗುವನ್ನು ನೋಡಿ ಖುಷಿಪಟ್ಟು "ವೈದ್ಯರೇ ದೇವರು" ಅನ್ನುವರು ಒಂದೆಡೆಯಾದರೆ, ವೈದ್ಯರು ಕಷ್ಟಪಟ್ಟರೂ ರೋಗಿ ಉಳಿಯದೆ ಮೃತಪಟ್ಟಾಗ, "ವೈದ್ಯರು ರಾಕ್ಷಸರು" ಅನ್ನುವವರು ಇನ್ನೊಂದೆಡೆ. ದೇವರೆಂದಾಗ ಹಿಗ್ಗದೆ ಯಮ ಎಂದಾಗ ಕುಗ್ಗಬಾರದು. ಎಲ್ಲಾ ಸಂದರ್ಭಗಳಲ್ಲೂ ನಿರ್ಭಾವುಕರಾಗಿ ನಮ್ಮ ಕಾಯಕವನ್ನು ಮಾಡುತ್ತಿರಬೇಕು. ಇದು ನಾನು ಗುರುಗಳಿಂದ ಕಲಿಯುತ್ತಿರುವ ಪಾಠ.

ವರ್ಷಗಳ ಹಿಂದೆ, ಹುಬ್ಬಳ್ಳಿಯ ದೈವ ಸ್ವರೂಪಿಗಳಾದ ಪುಟ್ಟರಾಜ ಗವಾಯಿಗಳು ಶಿವಸಾಯುಜ್ಯ ಹೊಂದಿದ್ದರು. ಅವರ ಗೌರವಾರ್ಥ ರಜಾ ಘೋಷಿಸಲಾಗಿತ್ತು. ಮನೆಯಲ್ಲಿ ಕುಳಿತು ಟಿ.ವಿ.ಯಲ್ಲಿ ಬಿತ್ತರವಾಗುತ್ತಿದ್ದ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದೆ. ನಮ್ಮ ಶ್ರೀಗಳು ಹುಬ್ಬಳಿಗೆ ಹೋಗಿ ಬಂದಿದ್ದನ್ನೂ ತೋರಿಸುತ್ತಿದ್ದರು. ರಾತ್ರಿ ಹೊತ್ತಿಗೆ ಮನಸ್ಸು ಬಹಳ ಭಾರವಾಗಿತ್ತು. ಪೂಜ್ಯರನ್ನು ನೋಡಲೇಬೇಕು. ಅವರಿಗೆ ನಮಸ್ಕರಿಸಬೇಕು ಎನಿಸುತ್ತಿತ್ತು. ಯಜಮಾನರೊಂದಿಗೆ ಶ್ರೀಮಠಕ್ಕೆ ಹೋದರೆ, ಶ್ರೀಗಳು ಪೂಜೆ, ಪ್ರಸಾದ ಮುಗಿಸಿ ರಾಧಾಕೃಷ್ಣನ್‌ರವರು ಬರೆದಿದ್ದ ಪುಸ್ತಕವನ್ನು ಓದುತ್ತಿದ್ದರು. ಮುಖ್ಯವಾದ ವಿಷಯದ ಕೆಳಗೆ ಗೆರೆಯನ್ನು ಎಳೆದಿದ್ದರು. ಅದನ್ನು ನನಗೆ ತೋರಿಸಿ **"ನೋಡು ಇಂದಿನ ಸಾಮಾಜಿಕ ಸ್ಥಿತಿಯ ಬಗ್ಗೆ ೫೦ ವರ್ಷಗಳ ಹಿಂದೆಯೇ ಬರೆದಿದ್ದರು"** ಎಂದು ಆ ವಾಕ್ಯವನ್ನು ನನ್ನಿಂದ ಓದಿಸಿದರು. ಪುಸ್ತಕ ಇಂಗ್ಲೀಷ್‌ನಲ್ಲಿತ್ತು.

ನನ್ನ ಭಾವನೆಗಳಿಗೆ ಪದಗಳೇ ಇರಲಿಲ್ಲ. ತಮ್ಮ ವಯೋಧರ್ಮವನ್ನೂ ಲೆಕ್ಕಿಸದೇ ಒಂದೇ ದಿನದಲ್ಲಿ ಅಷ್ಟು ದೂರದ ಹುಬ್ಬಳ್ಳಿಗೆ ಹೋಗಿ ಬಂದಿದ್ದರು, ಆದರೆ ದಿನನಿತ್ಯದ ಓದುವ ಅಭ್ಯಾಸವನ್ನು ಮುಂದುವರಿಸಿದ್ದರು. ಬೆಳಗಿನ ಆಗು ಹೋಗುಗಳು ಅವರ ಶರೀರಕ್ಕಾಗಲಿ, ಮನಸ್ಸಿಗಾಗಲಿ ವ್ಯತ್ಯಯ ಮಾಡಿರಲಿಲ್ಲ.

**೪. ಧನಾತ್ಮಕ, ಸಮಾಜಮುಖಿ ವ್ಯಕ್ತಿತ್ವ** – ಒಮ್ಮೆ ನಾವುಗಳೆಲ್ಲರೂ ಶ್ರೀಗಳ ಆರೋಗ್ಯದ ಬಗ್ಗೆ ಆತಂಕ ಗೊಂಡಿದ್ದೆವು. ಆದರೆ ಅದು ಅವರನ್ನು ಭಾದಿಸುತ್ತಿರಲಿಲ್ಲ. ಎಂದಿನಂತೆ ಭಕ್ತರಿಗೆ ೧೨ನೇ ಶತಮಾನದ ಶರಣರ ಇಂದಿನ ಪ್ರಸ್ತುತತೆ ಬಗ್ಗೆ ಮಾತನಾಡುತ್ತಿದ್ದರು. ನಾನು ಕೇಳಿಸಿಕೊಳ್ಳಲು ಹತ್ತಿರ ಹೋದೆ. ತಕ್ಷಣ ಶಿವಶರಣೆಯರಾದ ಅಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ಅಕ್ಕಮಹಾದೇವಿಯವರ ಬಗ್ಗೆ ಹೇಳುತ್ತಾ, "ಹೆಣ್ಣು ಮಕ್ಕಳು ಧೀರರಾಗಿರಬೇಕು, ಸಮಾಜವನ್ನು ತಿದ್ದುವ ಕೆಲಸ ನಿಮ್ಮಿಂದಾಗಬೇಕು" ಎಂದರು. ವೈದ್ಯರಾದ ನಾವು ನಮ್ಮ ಬಗ್ಗೆ ಯೋಚಿಸಬಾರದು. ಯಾವಾಗಲೂ ಸಮಾಜದ ಒಳಿತಿಗಾಗಿ ಕೆಲಸ ಮಾಡಬೇಕೆಂದು ಮನವರಿಕೆ ಮಾಡಿದರು.

ಹಿರಿಯರಿಂದ ಕೇಳಿದ್ದು, ನಾನು ಓದಿರುವುದು ಹಾಗು ನಾನು ಕಂಡಿರುವುದು ಸದ್ಗುರುಗಳ ಧನಾತ್ಮಕ ವ್ಯಕ್ತಿತ್ವ, ಮನಸ್ಸಿನಲ್ಲಿ ಪ್ರೀತಿ ತುಂಬಿರಬೇಕು, ಸಂತೃಪ್ತ ಭಾವವಿರಬೇಕು, ಅನಂದವಿರಬೇಕು, ಅದೊಂದು ದೈವಿಕ ಭಾವ. ಇದನ್ನು ಶ್ರೀಗಳಲ್ಲಿ ಕಂಡೇ ಎಲ್ಲರೂ ಅವರನ್ನು "ನಡೆದಾಡುವ ದೇವರು" ಅನ್ನುವುದು.

ನನ್ನ ಗುರುದೇವರ ಇನ್ಯಾವ ವ್ಯಕ್ತಿತ್ವವನ್ನು ವರ್ಣಿಸಲಿ, ದಯೆ, ಕರುಣೆ, ಶಾಂತಿ, ಸಮಾಧಾನ, ಪ್ರೀತಿ, ಮಮತೆ ಇವುಗಳೆಲ್ಲವುಗಳ ಆಗರವೇ ನನ್ನ ಗುರುದೇವ. ಅವರದೇ ಚೇತನ, ಶ್ರೀಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ನಮ್ಮ ಜೀವನದ ಪ್ರತಿಯೊಂದು ಹೆಜ್ಜೆಗೂ ಮಾರ್ಗದರ್ಶಕರು. ಭವರೋಗ ವೈದ್ಯರಾದ, ನಿರಂಜನರ ಸಾನಿಧ್ಯದಲ್ಲಿ ಲೌಕಿಕ ವೈದ್ಯಳಾದ ನನ್ನ ಜೀವನ ಸಾರ್ಥಕಗೊಳ್ಳುತ್ತಿದೆ.

ಶಿವಕುಮಾರ ಶ್ರೀಗಳ ಮೇರು ವ್ಯಕ್ತಿತ್ವಕ್ಕೆ ಅವರೇ ಸಾಟಿ. ಅಲ್ಪಳಾದ ನಾನು, ಮೌನವಾಗಿ ಶರಣೆನ್ನುತ್ತೇನೆ. ಶ್ರೀಗಳನ್ನು ಕಂಡಾಗಲೆಲ್ಲ, ಶರಣ ಆದಯ್ಯನವರ ಈ ವಚನ ಅವರ ವ್ಯಕ್ತಿತ್ವವನ್ನು ನೆನಪಿಸುತ್ತದೆಯಲ್ಲವೇ ಎನಿಸುತ್ತದೆ. ಮಾತಿಗೆ ಮೀರಿದ ದಿವ್ಯ ವ್ಯಕ್ತಿತ್ವ ಶ್ರೀಗಳದ್ದು.

**ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ,**
**ಪ್ರಾಣದಲಿ ನಿರ್ಭಯ, ಚಿತ್ತದಲಿ ನಿರಪೇಕ್ಷ,**
**ವಿಷಯದಲ್ಲಿ ಉದಾಸೀನ, ಭಾವದಲಿ ದಿಗಂಬರ,**
**ಜ್ಞಾನದಲಿ ಪರಮಾನಂದ ನೆಲೆಗೊಂಡ ಬಳಿಕ**
**ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿರೋ !**

ಕಣ್ಣಿಗೆ ಕಾಣುವ ಶಿವನಿಗೆ ನನ್ನ ಅನಂತಾನಂತ ಭಕ್ತಿಪೂರ್ವಕ ಪ್ರಣಾಮಗಳು.

* * *

# ಜಗದ ಜಂಗಮರು

– ಡಾ. ಎಸ್. ಶಿವರಾಜಪ್ಪ *

ಶ್ರೀ ಸಿದ್ಧಗಂಗಾ ಕ್ಷೇತ್ರ ಸರ್ವರಿಗೂ ಸಿದ್ಧಿ ನೀಡುವ ಒಂದು ಅವಿಮುಕ್ತ ಕ್ಷೇತ್ರ. ಇಲ್ಲಿನ ಐತಿಹ್ಯ ಪರಂಪರೆ. ಸಾಧಿಸಿರುವ ಲೋಕೋಪಕಾರಕ ಮಹಾಕಾರ್ಯ ಭಾರತದ ಇತಿಹಾಸ ಪುಟದಲ್ಲಿ ಬರೆದಿಡುವ ದಾಖಲಾತಿಗಳು, ಶ್ರೀಕ್ಷೇತ್ರ ಶತಮಾನದುದ್ದಕ್ಕೂ ಸಾಧಿಸಿರುವ ಆಧ್ಯಾತ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಜನಮುಖಿ ಕಾರ್ಯಗಳು ಭಾರತ ಹಾಗೂ ವಿಶ್ವಾದ್ಯಂತ ಜನಮನ ಸೆಳೆದಿರುವುದು ಶ್ರೀಕ್ಷೇತ್ರದ ಹಿರಿಮೆ ಗರಿಮೆಯನ್ನು ಸೂಚಿಸುತ್ತದೆ.

೧೯ನೇ ಶತಮಾನದ ಶ್ರೀಮದ್ ಅಟವೀಶ್ವರರು ಮತ್ತು ಶ್ರೀಮದ್ ಉದ್ದಾನ ಶಿವಯೋಗಿಗಳು ಶ್ರೀಕ್ಷೇತ್ರದ ಪ್ರೇರಕ ಶಕ್ತಿಗಳು. ಇವರೀರ್ವರ ಆಶೀರ್ವಾದವನ್ನೊತ್ತು ೧೯೩೦ರಲ್ಲಿ ಕ್ಷೇತ್ರಾಧಿಪತಿಗಳಾಗಿ ಬಂದ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹತ್ತು ಹಲವು ರಚನಾತ್ಮಕ ಕಾರ್ಯಗಳೊಂದಿಗೆ ದಿವ್ಯ ಭವ್ಯ ಕ್ಷೇತ್ರವನ್ನಾಗಿ ಮಾಡಿದರು. ಇಲ್ಲಿ ಓದಿ ಬಾಳು ಬೆಳಗಿಸಿಕೊಂಡವರು ಕೋಟ್ಯಾನು ಕೋಟಿ ಜನರು. ಶ್ರೀಗಳವರ ನಿಷ್ಕಾಪಟ್ಯ ನಡೆ–ನುಡಿ, ತಪಸ್ಸು, ಪವಿತ್ರ ಸಂಕಲ್ಪ, ಕ್ರಿಯಾಶಕ್ತಿಯ ಪ್ರಾಬಲ್ಯಗಳು ಕೈಯಿಟ್ಟ ಕ್ರಿಯೆಗೆ ಅಪ್ರತಿಹತ ಶಕ್ತಿ ಎನಿಸುತ್ತಿವೆ. ಜಾತಿ, ಮತ, ಪಂಥ, ಬೇಧವಿಲ್ಲದೆ ಒಗ್ಗೂಡಿಸುವ, ಒಟ್ಟಿಗೆ ಸನ್ಮಾರ್ಗದತ್ತ ಕರೆದೊಯ್ಯುವಂತಹ ಸರ್ವಾದರಣೀಯರಾಗಿದ್ದಾರೆ.

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಪವಿತ್ರ ಕಾಯಕ ಮತ್ತು ಸೇವಾ ಮನೋಭಾವನೆಯಿಂದ ಶತಾಯುಷಿಗಳಾಗುತ್ತಿರುವುದು ಈ ನಾಡಿನ ಸುಕೃತವೇ ಸರಿ. ಈ ದೀರ್ಘಾವಧಿಯ ಅವರ ತಪಃಶಕ್ತಿ ಕಾಯಕನಿಷ್ಠೆ, ದಾಸೋಹ ಪ್ರೇಮ ಜನತೆಯ ಸರ್ವತೋಮುಖ ಕಲ್ಯಾಣಕ್ಕೆ ಪ್ರೇರಕ ಶಕ್ತಿಯಾಗಿದೆ. ಇಂಥ ಕಾಯಕ ತಪಸ್ವಿಗಳು ಜನ ಕಲ್ಯಾಣಕ್ಕೆ ನಾಂದಿಯಾಗಿದ್ದಾರೆ. ಇಂಥ ಕಾಯಕ ತಪಸ್ವಿಗಳು ಜನ ಕಲ್ಯಾಣಕ್ಕೆ ಮಾಡಿದ ಸ್ಮರಣೀಯ ಕಾರ್ಯಗಳನ್ನು ಸ್ಮರಿಸಿ ನಾಡಿನುದ್ದಕ್ಕೂ ಭಕ್ತಿಭಾವವನ್ನು ಪ್ರಕಟಿಸುತ್ತಿರುವುದು ಭಕ್ತವೃಂದದ ಸುದೈವ. ಶ್ರೀಗಳ ಅವಿರತ ಶ್ರಮದಫಲ.

ಸಹಸ್ರಾರು ವಿದ್ಯಾರ್ಥಿಗಳ ಜೀವನ ರಕ್ಷಣೆ. ದೀನದಲಿತರ ನೊಂದವರ, ಹಸಿದವರ, ಅತಿಥಿ ಅಭ್ಯಾಗತರ ಯೋಗಕ್ಷೇಮಕ್ಕೆ ಮೀಸಲಾಗಿದೆ. ಅವರೊಂದು ಶಿವ ಸ್ವರೂಪವೇ ಎನಿಸಿದ್ದಾರೆ. ನೂರಾರು ವಿದ್ಯಾರ್ಥಿನಿಲಯ, ಶಾಲಾ ಕಾಲೇಜುಗಳನ್ನು ಸ್ಥಾಪಿಸುವುದರ ಮೂಲಕ ಸರ್ವೋದ್ಧಾರದ ಸಮಗ್ರ ಯೋಜನೆಗಳವರೆಗೆ ಎಲ್ಲಾ ಕಾರ್ಯಗಳಲ್ಲಿಯೂ ಕಾಯಕ ನಿಷ್ಠೆಯನ್ನು ತೋರಿಸಿ, ಗಡಿಯಾರವೂ ನಾಚಿಕೊಳ್ಳುವಂತಹ ಸಮಯ ಪ್ರಜ್ಞೆಯಿಂದ ಕರ್ತವ್ಯ ನಿರ್ವಹಿಸಿ, ಒಂದು ಅದ್ಭುತ ಶಕ್ತಿಯಾಗಿ, ಕಲ್ಪವೃಕ್ಷದಂತೆ ಬೆಳೆದು ನಿಂತಿದ್ದಾರೆ. ಭಗವಂತನ ಕೃಪಾಶಕ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಮೇಲೆ ಅಪಾರವಾಗಿ ಬೀರಿದೆ.

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಲೋಕೋತ್ತರ ಗುಣ, ವಿಶೇಷ ಲಿಂಗ ತಪಸ್ಸು, ವಾತ್ಸಲ್ಯಭಾವ, ಕ್ರಿಯಾಶಕ್ತಿಗಳು ಪವಾಡ ಸದೃಶವಾದುದು. ಈ ಲೋಕದ ಜನಗಳೆಲ್ಲ ಶ್ರೀಗಳವರ ಉದಾತ್ತ ನಡೆನುಡಿಗಳಿಗೆ ಮಾರು ಹೋಗಿ ಪರಮ ಭಕ್ತರಾಗಿದ್ದಾರೆ. ಅವರ ದರ್ಶನ ಮಾಡುವುದೆಂದರೆ ಭಕ್ತರಿಗೆ ಎಲ್ಲಿಲ್ಲದ ಭಕ್ತಿ ಶ್ರದ್ಧೆ, ಉತ್ಸಾಹ, ಮಮತೆ, ಗೌರವ, ಶ್ರೀಗಳವರಿಗೂ ಸಹ ಭಕ್ತರನ್ನು ಕಂಡಾಗ ಆಶ್ರಯ ಬಯಸಿದಬಂದ ವಿದ್ಯಾರ್ಥಿಗಳನ್ನು ಕಂಡಾಗ ಅದೇ ಮಮತೆ ಆನಂದಗಳು ಉಕ್ಕಿ ಬರುವುದನ್ನು ಕಾಣುತ್ತೇವೆ. ಬಹಳ ಹರ್ಷ ಚಿತ್ತರಾಗಿ ಬರಮಾಡಿಕೊಂಡು ಯೋಗಕ್ಷೇಮ, ಅಭ್ಯುದಯಗಳನ್ನು ವಿಚಾರಿಸಿ ಬಂದ ಉದ್ದೇಶಗಳಿಗೆ ಪರಿಹಾರ ಸೂಚಿಸುತ್ತಾರೆ. ಎಲ್ಲಾ ಕೆಲಸವಾದ ಮೇಲೆ 'ಊಟ ಮಾಡಿ ಹೋಗಿ' ಎಂಬ ಪ್ರಾಸಾದಿಕ ಆಶೀರ್ವಾದ ನೀಡುತ್ತಾರೆ. ಈ ಗುರು ಶಿಷ್ಯರ ಸಮಾಗಮ ಅಗಲಿಕೆಗಳು ತವರೂರ ತಿಟ್ಟತ್ತಿ ತಿರುಗಿ ನೋಡುವ ಮಮತೆಯ ಮಗಳ ಕರುಳ ಮಿಡಿದಂತಿರುತ್ತದೆ. ಕಣ್ಣಿಗೆ ಕಾಣದ ದೇವರು ಊರು ಊರಲ್ಲೂ ನೂರಾರು. ಆದರೆ ಧರ್ಮ ಕರ್ಮಗಳ ಹಾದಿ ತೋರಿ ಆ ದೇವರ ಸನ್ನಿಧಿಗೆ ನಡೆಸಿದ ಈ ಪ್ರತ್ಯಕ್ಷ ಗುರುವೆ ನಮ್ಮ ಪಾಲಿನ ದೇವರು ಎಂದು ನಂಬಿರುವ ಕೋಟ್ಯಾನು ಕೋಟಿ ಭಕ್ತರನ್ನು ಇಂದಿಗೂ ಕಾಣಬಹುದು.

* ಸಾಹಿತಿಗಳು, ಮೈಸೂರು





ಶತಕದ ಬದುಕಿಗೆ ಪಾದಾರ್ಪಣೆ ಮಾಡುತ್ತಿರುವ ದಿನದಂದೇ 'ಕರ್ನಾಟಕ ರತ್ನ' ಎಂದೆನಿಸಿಕೊಳ್ಳುವುದು ಯೋಗಾನುಯೋಗ, ೨೧ನೇ ಶತಮಾನದ 'ನಡೆದಾಡುವ ದೇವರು' ಎಂದು ಖ್ಯಾತಿ ಹೊಂದಿರುವ ಶ್ರೀ ಸಿದ್ಧಗಂಗಾ ಮಠಾಧೀಶರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಅವರು ಬದುಕಿನ ಶತಕ ಬಾರಿಸಿದಂದೇ ರಾಜ್ಯ ಸರಕಾರ ಕರ್ನಾಟಕ ರತ್ನ ಎಂದು ಗೌರವಿಸಿ ಕೃತಾರ್ಥವಾಗಿದೆ. ಇಂಥ ಅಪೂರ್ವ ಸಂಗಮ ಕಾಣುವ ಯೋಗ ಅಸಂಖ್ಯ ಭಕ್ತಾದಿಗಳದು. ಏಕೆಂದರೆ ತಮ್ಮ ಸರಳ, ಸಜ್ಜನಿಕೆ, ನಿಸ್ವಾರ್ಥ, ಪ್ರಾಮಾಣಿಕತೆಯೊಂದಿಗೆ ಭಕ್ತಿ, ಜ್ಞಾನ ಮತ್ತು ಕರ್ಮ ಯೋಗಗಳ ಸಾಧನೆಗೈಯುತ್ತಿರುವ ಶ್ರೀ ಶ್ರೇಷ್ಠ ಸಂತ ಸಿದ್ಧಗಂಗಾ ಶ್ರೀಗಳು ಈಗಾಗಲೇ ಜನಮನದಲ್ಲಿ ರತ್ನರಾಗಿ ಬಿಟ್ಟಿದ್ದಾರೆ.

ಇತ್ತೀಚೆಗೆ ಅವರಿಗೆ ಪ್ರದಾನ ಮಾಡಿದುದು ಏನಿದ್ದರೂ ಸಮಸ್ತ ಕನ್ನಡಿಗರ ಗೌರವ ಅರ್ಪಣೆ, ತ್ರಿವಿಧ ದಾಸೋಹಮೂರ್ತಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ, ರಾಜ್ಯ ಸರಕಾರ ತಡವಾಗಿಯಾದರೂ ಎಚ್ಚೆತ್ತುಕೊಂಡು ಸಮಾನತೆಯ ಹರಿಕಾರರೋರ್ವರಿಗೆ ನಾಡಿನ ಅತ್ಯುನ್ನತ ಪ್ರಶಸ್ತಿ **'ಕರ್ನಾಟಕ ರತ್ನ'** ಪ್ರದಾನ ಮಾಡಿತೆಂಬುದೇ ಸಮಾಧಾನಕರ.

ಶ್ರೀ ಸಿದ್ಧಗಂಗಾ ಮಠದ ವಿಶೇಷವೇನು? ಅದರೊಂದಿಗೆ ಪೂರ್ಣ ಲೀನರಾಗಿ ಹೋಗಿರುವ ಶತಾಯುಷಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶ್ರೇಷ್ಠತೆ ಏನು? ಶ್ರೀ ಸಿದ್ಧಗಂಗಾಶ್ರೀಗಳ ಹೆಸರನ್ನು ಪ್ರಸ್ತಾಪಿಸುವಾಗಲೆಲ್ಲ ನಡೆದಾಡುವ ದೇವರು, ತ್ರಿವಿಧ ದಾಸೋಹ ಮೂರ್ತಿ, ಕರ್ಮಯೋಗಿ ಎಂದೇ ಹೇಳಲಾಗುತ್ತದೆ. ಅದೇ ಸ್ವಾಮೀಜಿಯವರ ಬದುಕಿನ ಮಂತ್ರವಾಗಿದೆ. ಏನಿದು ತ್ರಿವಿಧ ದಾಸೋಹ? ೧೯೩೦ರಲ್ಲಿ ಶ್ರೀಮಠದ ಅಂಗವಾಗಿ ಹೋದ ಸ್ವಾಮೀಜಿ ಅಂದಿನಿಂದಲೂ ಅವಿಶ್ರಾಂತವಾಗಿ ಮಠಕ್ಕೆ ಸದ್ಬೆಳಕು ಕರುಣಿಸುತ್ತ ಸಹಸ್ರಾರು ಮಕ್ಕಳ ಭವಿಷ್ಯವನ್ನು ಬೆಳಗುತ್ತ ಮುನ್ನಡೆದಿದ್ದಾರೆ.

ಅನ್ನ, ಆಶ್ರಯ ಹಾಗೂ ವಿದ್ಯಾದಾನ ಮೂಲಕ ನಾಡಿಗೆ ಅನುಪಮ ಸೇವೆ ಸಲ್ಲಿಸುತ್ತಿರುವ ಶ್ರೀಗಳು ತ್ರಿವಿಧ ದಾಸೋಹಿಗಳು. ಒಂಬತ್ತು ಸಾವಿರ ವಿದ್ಯಾರ್ಥಿಗಳು ಮತ್ತು ಸಹಸ್ರಾರು ಭಕ್ತರಿಗೆ ನಿತ್ಯ ದಾಸೋಹ. ಪೂರ್ವ ಪ್ರಾಥಮಿಕದಿಂದ ತಂತ್ರಜ್ಞಾನದವರೆಗೆ ಶಿಕ್ಷಣ ಸೌಲಭ್ಯ ಇಲ್ಲಿನ ಭವ್ಯ ಪರಂಪರೆಯಿಂದ ಪ್ರಭಾವಿತರಾದ ಪೋಷಕರು ತಮ್ಮ ಮಕ್ಕಳನ್ನು ಶ್ರೀಮಠಕ್ಕೆ ಸೇರಿಸಲು ಹಾತೊರೆಯುವುದು ಅಚ್ಚರಿಯೇನಲ್ಲ. ವಿದ್ಯೆಯೊಂದಿಗೆ ವಿನಯಶೀಲರಾಗುವ ಇಲ್ಲಿನ ಸಹಸ್ರಾರು ವಿದ್ಯಾರ್ಥಿಗಳು ಉನ್ನತ ಹುದ್ದೆ ಹಾಗೂ ಸತ್ಪ್ರಜೆಗಳಾಗಿದ್ದಾರೆ. ಈ ಎಲ್ಲ ಕೀರ್ತಿಯ ಹಿಂದೆ ಸಿದ್ಧಗಂಗಾ ಶ್ರೀಗಳ ಪಾತ್ರ ಮಹತ್ವದ್ದು. ಒಟ್ಟಾರೆ ಮಠದ ಎಲ್ಲರ ಕಾಯಕವೇ ಇಂತಹ ಜ್ಞಾನ ಪ್ರಸಾರಕ್ಕೆ ಕಾರಣವೆಂದು ಶ್ರೀಗಳು ವಿನಯಭಾವದಿಂದ ನುಡಿದರೂ ಇಂತು ಶ್ರೀಮಠವು ವಿಶ್ವವಿಖ್ಯಾತವಾಗುವಲ್ಲಿ ಈ ಕರ್ಮಯೋಗಿಯೇ ರೂವಾರಿ ಎಂಬುದು ನಿಸ್ಸಂದೇಹ. ರಾಷ್ಟ್ರೀಯ ಮತ್ತು ಧಾರ್ಮಿಕ ಏಕತೆಯ ಸಂಕೇತವಾಗಿ ಶ್ರೀಮಠವು ಇಡೀ ದೇಶಕ್ಕೆ ಮಾದರಿಯಾಗಿರುವುದು ನಾಡಿನ ಹೆಮ್ಮೆಯ ಸಂಗತಿಯಾಗಿದೆ.

ಸಿದ್ಧಗಂಗೆ ಪ್ರಸಿದ್ಧಿ ಧಾರ್ಮಿಕ ಕ್ಷೇತ್ರ ಅದು ಅದ್ಭುತವಾದ ವಿದ್ಯಾದಾನ ಕೇಂದ್ರವಾಗಿಯೂ ರೂಪುಗೊಂಡಿರುವುದು ಶಿಕ್ಷಣಕ್ಕೆ ನೀಡುತ್ತಿರುವ ಮಹತ್ವವನ್ನು ಸಾರುತ್ತದೆ. ಬದಲಾಗುತ್ತಿರುವ ಸಮಾಜದಲ್ಲಿ ಯುವಜನರನ್ನು ಸಿದ್ಧಪಡಿಸಲು ಅಗತ್ಯವಾದ ವಿಜ್ಞಾನ ತಂತ್ರಜ್ಞಾನ ಶಿಕ್ಷಣಕ್ಕೆ ಆದ್ಯತೆ ನೀಡಲಾಗಿದೆ. ಹಾಗೆಂದು ಮೂಲಭೂತವಾದ ಕಲೆ, ಸಂಸ್ಕೃತಿ ಇತ್ಯಾದಿಗಳನ್ನು ಮರೆತಿಲ್ಲ. ತಮ್ಮ ನಿತ್ಯ ಕಾಯಕದಲ್ಲಿ ಸರ್ವಜನರಿಗೂ ಲೇಸನ್ನು ಬಯಸುತ್ತ, ಸಾಮಾಜಿಕ ಅಸಮತೋಲನ ನಿವಾರಣೆಗಾಗಿ ಶ್ರಮಿಸುತ್ತ, ನಿತ್ಯವೂ ಜಾತಿ, ಮತ, ಪಂಥ ಎಂಬ ಭೇದವಿಲ್ಲದೆ ರಾಷ್ಟ್ರದ ವಿವಿಧೆಡೆಗಳಿಂದ ಬಂದಿರುವ ವಿದ್ಯಾರ್ಥಿಗಳಿಗೆ ಅನ್ನ, ಜ್ಞಾನ ಒದಗಿಸುತ್ತ ಸತತವಾಗಿ ಈ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಗಳು ನಿಜಕ್ಕೂ ಕರ್ನಾಟಕ ರತ್ನವೇ ಆಗಿದ್ದಾರೆ.

ಇಲ್ಲಿ 'ಎಲ್ಲ ನನ್ನವರೆನ್ನುವ ಭಾವದ ಕರುಣೆಯೇ ಕಣ್ತೆರೆದಿದೆ' ಎಂಬ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರ ನುಡಿ ಮನನೀಯ. ಶ್ರೀ ಗೋಸಲ ಸಿದ್ಧೇಶ್ವರರು ಸ್ಥಾಪಿಸಿದ್ದ ಸಿದ್ಧಗಂಗಾ ಮಠದ ಬಗೆಗೆ ಇದಕ್ಕಿಂತ ಸರಳವಾಗಿ ಹೇಳಲಾಗದು. ಶ್ರೀ ಗೋಸಲ ಸಿದ್ಧೇಶ್ವರರ ಉದ್ದೇಶವನ್ನು ಸಾಕಾರಗೊಳಿಸಿದ ಕೀರ್ತಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳದು. ಶತಾಯುಷಿಯಾದರೂ ಎಂದಿನ ಉತ್ಸಾಹದಲ್ಲಿ ಮಠದ ಅಭ್ಯುದಯಕ್ಕಾಗಿ ಶ್ರಮಿಸುತ್ತಿರುವ ಈ ಸಂತ ಸಕಲರಿಗೂ ಮಾದರಿ.

ಬುದ್ಧನ ಕರುಣೆ, ಶಂಕರರ ವಿಚಾರ, ರಾಮಾನುಜರ ಮಮತೆ, ಬಸವಣ್ಣನವರ ಭಕ್ತಿ ಭಾವ, ವಿವೇಕಾನಂದರ ವಿವೇಕ ವಾಣಿ, ರಾಜೇಂದ್ರರ ಮುಗುಳ್ನಗೆ, ಸಿದ್ಧಗಂಗಾ ಶಿವಕುಮಾರರ ಕಾಯಕ ದಾಸೋಹ ಪ್ರೇಮಗಳನ್ನು ಮೆಚ್ಚಿ

ಆನಂದಿಸುವ ಯಾವ ವ್ಯಕ್ತಿ ತಾನೆ ಅವರ ಭಕ್ತನಾಗಲಾರ? ಜಾತಿ-ಭೇದವಿಲ್ಲದೆ, ಬಡವ-ಶ್ರೀಮಂತನೆನ್ನದೆ ಸಮಾಜದಲ್ಲಿ ನೈತಿಕ ಸ್ಥಿರತೆಯನ್ನು ಕಾಪಾಡುವುದರಲ್ಲಿ ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅಗ್ರಮಾನ್ಯರು.

ಈಗ ಮಹಾದಾಸೋಹಿಗೆ ೧೧೦ನೇ ವರ್ಷ. ಶ್ರೀಮಠದ ನಿರಂಜನ ಪಟ್ಟಾಧಿಕಾರವನ್ನು ವಹಿಸಿಕೊಂಡು ದಿನಾಂಕ ೩.೩.೨೦೧೭ಕ್ಕೆ ೮೭ ವರ್ಷಗಳು. ಎಂಬತ್ತು ವರ್ಷ ಬದುಕುವುದೇ ಕಷ್ಟ. ಹೀಗಿರುವಾಗ ಪರಮಪೂಜ್ಯರು ೧೦೯ ವರ್ಷಗಳನ್ನು ದಾಟಿ ಮುಂದೆ ಸಾಗುತ್ತಿದ್ದಾರೆ. ಅಂದರೆ ಇದು ಪವಾಡವೇ ಹಾಗೂ ಗಿನ್ನಿಸ್ ದಾಖಲೆಗೆ ಸೇರಿಸಬೇಕಾದ ವಿಷಯವೂ ಕೂಡ. ಶ್ರೀಗಳವರ ಅವಿರತ, ನಿಸ್ವಾರ್ಥ ಸೇವೆಯಿಂದಾಗಿ ಶ್ರೀಮಠದ ಕೀರ್ತಿ ವಿಶ್ವಾದ್ಯಂತ ಹರಡಿರುವುದನ್ನು ಕಾಣುತ್ತಿದ್ದೇವೆ.

ಮನಸ್ಸು ಮತ್ತು ವಯಸ್ಸು ಅತಿಮುಖ್ಯವಾಗಿ ಈ ಪ್ರಪಂಚವನ್ನು ನಿಯಂತ್ರಿಸುತ್ತಿರುವ ಎರಡು ಪ್ರಮುಖ ಶಕ್ತಿಗಳು. ಈ ಎರಡು ಶಕ್ತಿಗಳನ್ನು ಪೂಜ್ಯರು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಧರ್ಮ ಮೌಢ್ಯವಲ್ಲವೆಂಬುದನ್ನು ತಿಳಿ ಹೇಳಿ, ಅಲ್ಲಿ ವೈಚಾರಿಕತೆಯ ನೆಲೆಗಟ್ಟನ್ನು ಗಟ್ಟಿಗೊಳಿಸುವಂತೆ ಮಾತನಾಡುತ್ತಾರೆ. ದಿನಾಂಕ ೨೭.೨.೨೦೧೦ ರಂದು ಪೂಜ್ಯ ಕ್ಯಾತನಹಳ್ಳಿ ಶ್ರೀ ಶಿವಪ್ರಭು ಮಹಾಸ್ವಾಮಿಗಳ ಪುಣ್ಯಾರಾಧನೆಯಲ್ಲಿ ನೀಡಿದ ಆಶೀರ್ವಾದ, ಸೇರಿದ್ದ ಭಕ್ತವೃಂದ ಹಾಗೂ ರಾಜಕಾರಣಿಗಳನ್ನು ಬಡಿದೆಬ್ಬಿಸಿ ಜಾಗೃತಗೊಳಿಸಿತು. ಅವರ ಮಾತಿನಲ್ಲಿ ಹೇಳುವುದಾದರೆ –

ಭ್ರಷ್ಟಾಚಾರ ಮತ್ತು ಸ್ವಜನಪಕ್ಷಪಾತ ತಾಂಡವ ವಾಡುತ್ತಿರುವ ನಮ್ಮಲ್ಲಿ ರಾಜಕಾರಣಿಗಳು ಸ್ವಾರ್ಥ ಹಾಗೂ ಜಾತಿ ರಾಜಕಾರಣವನ್ನು ಬದಿಗಿಟ್ಟು, ಸೇವಾ ಮನೋಭಾವದಿಂದ ಆಡಳಿತ ನಡೆಸಬೇಕು. ಆಗ ಜನ ನಮ್ಮನ್ನು ಮೆಚ್ಚಿಕೊಳ್ಳುತ್ತಾರೆ. ವಿದೇಶದ ಗುಲಾಮಗಿರಿಯಿಂದ ತಪ್ಪಿಸಿಕೊಂಡ ನಮಗೆ ಇಂದು ಸಿಕ್ಕಿದ್ದು ನಮ್ಮವರೇ ಆದ ಅಧಿಕಾರಸ್ಥ ಗುಲಾಮಗಿರಿ.

ನಮ್ಮ ಸಮಾಜ ಅಧಃಪತನದತ್ತ ಸಾಗಲು ನಾವು ಕಾರಣರಾಗಿದ್ದೇವೆ. ಹೇಗೆಂದರೆ ಭ್ರಷ್ಟಾಚಾರ, ಮೋಸ, ವಂಚನೆ ಮುಂತಾದ ಸಮಾಜಘಾತುಕ ಅಂಶಗಳ ಬಗ್ಗೆ ಪ್ರಶ್ನೆ ಮಾಡುವ ಸಾಮರ್ಥ್ಯವನ್ನು ಕಳೆದುಕೊಂಡಿದ್ದೇವೆ. ಒಳ್ಳೆಯದನ್ನು ಪ್ರೋತ್ಸಾಹಿಸಿ, ಕೆಟ್ಟದ್ದನ್ನು ದೂರವಿಡುವ ಮನೋಭಾವವನ್ನು ನಾವು ಬೆಳೆಸಿಕೊಳ್ಳಬೇಕು.

ಜಾತೀಯತೆಯನ್ನು ನಿರ್ಮೂಲನಗೊಳಿಸಿ ನವ ಸಮಾಜವನ್ನು ಸ್ಥಾಪಿಸಿದ ಜಗಜ್ಯೋತಿ ಬಸವಣ್ಣನ ಆಡಳಿತ ಈಗ ಮತ್ತೆ ಪುನರಾವರ್ತನೆಯಾಗಬೇಕಾಗಿದೆ. ಈ ದಿಕ್ಕಿನಲ್ಲಿ ನಮ್ಮ ಜನಪ್ರತಿನಿಧಿಗಳು, ಆಡಳಿತ ಚುಕ್ಕಾಣಿ ಹಿಡಿದಿರುವವರು ಪ್ರಯತ್ನಶೀಲರಾಗಬೇಕು.

ಪೂಜ್ಯರ ಮೇಲಿನ ಒಂದೊಂದು ಮಾತುಗಳು ಸಮತಾವಾದವನ್ನು ಬಿತ್ತರಿಸುತ್ತವೆ. ಈ ದೃಷ್ಟಿಯಿಂದ ಪರಮಪೂಜ್ಯರು ಹೊಸ ವಿಚಾರಧಾರೆಂಯ ಹರಿಕಾರರಾಗಿದ್ದಾರೆ. ಮಹಾತ್ಮ ಶ್ರೀ ಗುರುಮಲ್ಲೇಶ್ವರರನ್ನು ಬಿಟ್ಟರೆ ಅನಂತರ ಬರುವ ಯುಗಪುರುಷರೆಂದರೆ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ಬಸವಹಾದಿಯಲ್ಲಿ ನಡೆದ ಮೊದಲಿಗರು ಇವರು. ಮಹಾದಾಸೋಹಿ, ಕಾಯಕಯೋಗಿ ಎನ್ನುವ ಶಬ್ದ ಇವರಿಗೆ ಅನ್ವರ್ಥವಾಗಿದೆ. ಈ ಕಾರಣದಿಂದ ಸಿದ್ಧಗಂಗಾ ಶ್ರೀಗಳು ಜಗದ ಜಂಗಮರು. ಕರುಣಾಮಯಿಗಳು. ಎಲ್ಲಕ್ಕಿಂತ ಹೆಚ್ಚಾಗಿ ಸರ್ವಜನ ಹಿತರಕ್ಷಕರು. ❑

### ಶ್ರೀವಾಣಿ

ಸರ್ಕಾರದ ವಾಹನಗಳು, ಸರ್ಕಾರದ ಇಂಧನ ಯಥೇಚ್ಛವಾಗಿ ಖರ್ಚಾಗುತ್ತಿದೆ. ಇಂದು ಅಧಿಕಾರಿಗಳು, ರಾಜಕಾರಣಿಗಳು ತಮ್ಮ ಸ್ವಂತ ಕೆಲಸಕ್ಕೂ ಸರ್ಕಾರದ ವಾಹನ ಉಪಯೋಗಿಸುತ್ತಿರುವುದು ದುರದೃಷ್ಟಕರ. ಹಿಂದೆ ಎಂಥ ಪ್ರಾಮಾಣಿಕತೆ ಇತ್ತು, ಎಂಥ ಕರ್ತವ್ಯ ಪ್ರಜ್ಞೆ ಇತ್ತು ; ಎಂಥ ರಾಷ್ಟ್ರಪ್ರೇಮ ಇತ್ತು ಎಂಬ ವಿಚಾರವನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳಬೇಕು. ಇದೆಲ್ಲವನ್ನು ಚಾಣಕ್ಯನನ್ನು ನೋಡಿ ಕಲಿಯಬೇಕು. ಅವನು ಇಡೀ ರಾಷ್ಟ್ರಕ್ಕೆ ಮಾದರಿಯಾಗಿದ್ದನು. ಅವನು ಒಂದು ಸಾಧಾರಣ ಮನೆಯಲ್ಲಿ ವಾಸಮಾಡುತ್ತಿದ್ದ. ಚಾಪೆ ಬಿಟ್ಟರೆ ಮತ್ತೊಂದಿರಲಿಲ್ಲ. ಅವನು ಎಷ್ಟರ ಮಟ್ಟಿಗೆ ಆಳ್ವಿಕೆ ಮಾಡುತ್ತಾ ಇದ್ದ ; ಎಷ್ಟು ವಿಚಾರವಂತನಾಗಿದ್ದ, ಪ್ರಾಮಾಣಿಕನಾಗಿದ್ದ, ಎಷ್ಟು ಸರಳ ಜೀವನ ನಡೆಸುತ್ತಿದ್ದ ಎಂಬುದನ್ನು ತಿಳಿದು ನಡೆಯಬೇಕು.

RNI No. 17139/69 "Siddaganga" Monthly - Postal Reg. No. L2/RNP/385/TMR/2015-17

# ಶ್ರೀಮಠಕ್ಕೆ ಗಣ್ಯರ ಭೇಟಿ


ರಾಷ್ಟ್ರಪತಿ ಶ್ರೀ ವಿ.ವಿ. ಗಿರಿ ಅವರೊಂದಿಗೆ ಪೂಜ್ಯ ಶ್ರೀ ಶ್ರೀಗಳವರು


ರಾಷ್ಟ್ರಪತಿ ಡಾ. ಶಂಕರ್ ದಯಾಳ ಶರ್ಮ ಅವರೊಂದಿಗೆ ಪೂಜ್ಯ ಶ್ರೀ ಶ್ರೀಗಳವರು


ರಾಷ್ಟ್ರಪತಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರೊಂದಿಗೆ ಪೂಜ್ಯ ಶ್ರೀ ಶ್ರೀಗಳವರು


ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿ ಅವರೊಂದಿಗೆ ಪೂಜ್ಯ ಶ್ರೀ ಶ್ರೀಗಳವರು


ಪ್ರಧಾನಮಂತ್ರಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರೊಂದಿಗೆ ಪೂಜ್ಯ ಶ್ರೀ ಶ್ರೀಗಳವರು


ಪ್ರಧಾನಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡ ಅವರೊಂದಿಗೆ ಪೂಜ್ಯ ಶ್ರೀ ಶ್ರೀಗಳವರು


ರಾಷ್ಟ್ರೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷೆ ಶ್ರೀಮತಿ ಸೋನಿಯಾ ಗಾಂಧಿಯವರಿಂದ ಪೂಜ್ಯರಿಗೆ ಗೌರವ ಸಮರ್ಪಣೆ


ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿ ಅವರಿಂದ ಪೂಜ್ಯರಿಗೆ ಗೌರವ ಸಮರ್ಪಣೆ